

## ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೧೦-೧೧ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಕುಂಬಾರರ ಸಂಸ್ಕೃತಿ - ಒಂದು ಅಧ್ಯಯನ


ನಿಬಂಧಕಾರರು

**ವೆಂಕಟೇಶ.ಆರ್**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎನ್.ಮಹೇಶ್ವರಿ**

ಸಹಾಯಕ ಪ್ರಾಧ್ಯಾಪಕರು
ಕನ್ನಡ ವಿಭಾಗ, ಜೆ.ಎಸ್.ಎಸ್ ಮಹಿಳಾ ಕಾಲೇಜು
ಚಾಮರಾಜನಗರ





ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೦-೧೧



ಕನ್ನಡ ವಿಶ್ವವಿದ್ಯಾಲಯ

ಹಂಪಿ

೨೦೧೦-೧೧ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ಕುಂಬಾರರ ಸಂಸ್ಕೃತಿ - ಒಂದು ಅಧ್ಯಯನ


ನಿಬಂಧಕಾರರು

**ವೆಂಕಟೇಶ.ಆರ್**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು





ಮಾರ್ಗದರ್ಶಕರು

**ಡಾ. ಎನ್.ಮಹೇಶ್ವರಿ**

ಸಹಾಯಕ ಪ್ರಾಧ್ಯಾಪಕರು

ಕನ್ನಡ ವಿಭಾಗ, ಜೆ.ಎಸ್.ಎಸ್. ಮಹಿಳಾ ಕಾಲೇಜು

ಚಾಮರಾಜನಗರ



ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೧೦-೧೧

# ದೃಢೀಕರಣ ಪತ್ರ

೨೦೧೦-೧೧ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS/00483**ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ ವೆಂಕಟೇಶ.ಆರ್ ಅವರು ನನ್ನ ಮಾರ್ಗದರ್ಶನದಲ್ಲಿ **"ಕುಂಬಾರರಸಂಸ್ಕೃತಿ - ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

**ಮೈಸೂರು**
೩೦-೦೫-೨೦೧೧

(ಡಾ. ಎನ್.ಮಹೇಶ್ವರಿ)
ಮಾರ್ಗದರ್ಶಕರು
ಸಹಾಯಕ ಪ್ರಾಧ್ಯಾಪಕರು
ಕನ್ನಡ ವಿಭಾಗ
ಜೆ.ಎಸ್.ಎಸ್.ಮಹಿಳಾ ಕಾಲೇಜು
ಚಾಮರಾಜನಗರ

# ಅಭ್ಯರ್ಥಿಯ ಘೋಷಣಾ ಪತ್ರ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿ ವಿದ್ಯಾರ್ಥಿಯಾಗಿ ಅಧ್ಯಯನ ಮಾಡುತ್ತಿರುವ ನಾನು ಡಾ. ಎನ್.ಮಹೇಶ್ವರಿ ಅವರ ಮಾರ್ಗದರ್ಶನದಲ್ಲಿ ಎಂ.ಫಿಲ್ ಪದವಿಯ ಒಂದು ಭಾಗವಾದ ನಿಬಂಧ ರಚನೆಗೆ ಸಂಬಂಧಿಸಿದಂತೆ **"ಕುಂಬಾರರ ಸಂಸ್ಕೃತಿ – ಒಂದು ಅಧ್ಯಯನ"** ಎಂಬ ವಿಷಯವನ್ನು ಆಯ್ಕೆಮಾಡಿಕೊಂಡು ಸಂಶೋಧನ ನಿಬಂಧವನ್ನು ಸಿದ್ಧಪಡಿಸಿರುತ್ತೇನೆ. ಈ ಸಂಶೋಧನಾ ನಿಬಂಧವನ್ನು ಈ ಮೊದಲು ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಬೇರಾವುದೇ ಪದವಿ ಅಥವಾ ಡಿಪ್ಲೋಮೋಗಳಿಗಾಗಲಿ ಒಪ್ಪಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಮೈಸೂರು**
೩೦-೦೫-೨೦೧೧

**(ವೆಂಕಟೇಶ.ಆರ್)**
ಕ್ರಮಸಂಖ್ಯೆ **KVTMKS/00483**
ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ಕುಂಬಾರರ ಸಂಸ್ಕೃತಿ – ಒಂದು ಅಧ್ಯಯನ

## ಪರಿವಿಡಿ



*****

# ಅಧ್ಯಾಯ - ೧

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಪ್ರಸ್ತುತ ಅಧ್ಯಯನದ ಉದ್ದೇಶ ಪ್ರಮುಖವಾಗಿ ಜನಪದ ಸಂಸ್ಕೃತಿಗೆ ಸಂಬಂಧಿಸಿದ್ದು ಜನಪದರ ದಾಖಲೆಗಳನ್ನು ಬಳಸಿಕೊಂಡು ಬಂದು ಗ್ರಾಮೀಣ ಸಮಾಜದ ಸಂಸ್ಕೃತಿಯ ಅಂತರಂಗ ಮತ್ತು ಬಹಿರಂಗಗಳನ್ನು ಸಾಧ್ಯವಾದಷ್ಟು ಬಿಡಿಸಿತೋರಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ. ಸಾಂಸ್ಕೃತಿಕ ಅಧ್ಯಯನದಲ್ಲಿ ಮೊದಲಿಗೆ ಕೇವಲ ಸಂಗ್ರಹಣೆ ಮತ್ತು ದಾಖಲಾತಿಗಳಿಗೆ ಗಮನ ನೀಡಲಾಯಿತು. ಈ ರೀತಿ ವಿದ್ವಾಂಸರು ದಾಖಲೆಯ ಕಡೆ ಗಮನಹರಿಸದಿದ್ದರೆ ಆಧುನಿಕತೆಯ ಪ್ರಭಾವದಿಂದ ಸಾಂಸ್ಕೃತಿಕತೆಯು ನಶಿಸಿಹೋಗುತ್ತಿತ್ತು. ಅದಕ್ಕಾಗಿಯೇ ಹೆಚ್ಚು ಹೆಚ್ಚು ದಾಖಲೆಗಳ ಸಂಗ್ರಹಣ ಕಾರ್ಯ ನಡೆಯಿತು. ಆದ್ದರಿಂದ ಮೊದಲು ದಾಖಲೆಗಳು ಮತ್ತು ಮಾಹಿತಿಗಳ ಸಂಗ್ರಹಣೆಯೇ ಮೊದಲ ಹಂತದ ಸಂಶೋಧನೆಯಾಗಿದೆ.

ಭಾರತ ವಿಭಿನ್ನ ಸಂಸ್ಕೃತಿಯ, ವಿವಿಧ ಧರ್ಮಗಳ, ಭಿನ್ನ ಭಾಷೆಭಾವಗಳ ತವರಾಗಿದೆ. ಶಾಂತಿ ಮತ್ತು ಸೌಹಾರ್ದತೆಗೆ ಮತ್ತೊಂದು ಹೆಸರೇ ಭಾರತ. ಇಂತಹ ಒಂದು ಅವಿಭಾಜ್ಯ ಅಂಗವಾದ ಕರ್ನಾಟಕವು ತನ್ನದೇ ಆದ ಸಂಪ್ರದಾಯ ಮತ್ತು ಸಾಂಸ್ಕೃತಿಕ ಹಿರಿಮೆಯನ್ನು ಹೊಂದಿದೆ.

ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಬದುಕಿನ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನ ವಿಧಾನ, ರೀತಿ–ನೀತಿಗಳು, ಕಟ್ಟುಕಟ್ಟಳೆಗಳು, ಸಂಪ್ರದಾಯಗಳು ಇತ್ಯಾದಿಗಳ ವಿವರಣೆಯೇ ಆಗಿದೆ. ಜನತೆಯ ಜೀವನವನ್ನು ಕುರಿತಾದ ಇಂತಹ ಅಧ್ಯಯನವನ್ನು ಸಾಂಸ್ಕೃತಿಕ ಅಧ್ಯಯನವೆಂದು ಕರೆಯಬಹುದು.

ಪ್ರಾಚೀನ ಕೈಗಾರಿಕೆಯು ಅವನತಿ ಹೊಂದಿ ಕಣ್ಮರೆಯಾಗುತ್ತಿರುವುದರಿಂದ ಈ ಕಸಬುನ್ನು ನಂಬಿದ ಜನತೆ ಅನ್ಯವೃತ್ತಿಗಳಲ್ಲಿ ಜ್ಞಾನ ಮತ್ತು ಕೌಶಲ್ಯತೆಯನ್ನು ಪಡೆಯದೆ ಅಸಂಘಟಿತ ಕಾರ್ಮಿಕರಾಗಿ ಸರ್ಕಾರದಿಂದ ಯಾವುದೇ ಸವಲತ್ತುಗಳನ್ನು ಪಡೆಯಲು ಶಕ್ಯವಾಗಿರುವುದಿಲ್ಲ. ಇವರ ಜೀವನ ಸ್ಥಿತಿಯು ತುಂಬಾ ಶೋಚನೀಯವಾಗಿದೆ. ನಿರುದ್ಯೋಗಿಗಳಾಗಿ ಬಡತನದ ಬೇಗೆಯಿಂದ ಬಳಲುವವುದಲ್ಲದೆ, ಅಜ್ಞಾನಿಗಳಾಗಿ, ಅಕ್ಷರ ಜ್ಞಾನವಿಲ್ಲದೆ ಮೂಢನಂಬಿಕೆವುಳ್ಳವರಾಗಿ ಸಮಾಜದ ಬಲಿಷ್ಠ ವರ್ಗಗಳ ಜೊತೆ ಪ್ರತಿಸ್ಪರ್ಧಿಗಳಾಗಿ ಜೀವನ ನಡೆಸಲು ದುಃಸ್ತರವಾಗಿದೆ. ಈ ಜನಾಂಗದಲ್ಲಿ

ರಾಜಕೀಯವಾಗಲಿ, ಸಾಮಾಜಿಕವಾಗಲಿ, ಆರ್ಥಿಕವಾಗಲಿ, ಶೈಕ್ಷಣಿಕವಾಗಲಿ ಯಾರು ಮುಂದೆ ಬಂದಿರುವುದಿಲ್ಲ. ಜನಾಂಗವು ಪ್ರತಿ ಗ್ರಾಮ, ನಗರ, ಪಟ್ಟಣ ಪ್ರದೇಶಗಳಲ್ಲಿ ಒಂದೆಡೆ ನೆಲೆಸದೆ ಚದುರಿ ಹೋಗಿರುತ್ತಾರೆ. ಸಮಾಜದಲ್ಲಿ ಇಂದೂ ಈ ಜನಾಂಗಕ್ಕೆ ಯಾವುದೇ ಸ್ಥಾನಮಾನ ದೊರೆತ್ತಿರುವುದಿಲ್ಲ.

ಇಂದು ನಾಗರಿಕತೆಯ ಪ್ರಭಾವದಿಂದ ಆಗುತ್ತಿರುವ ಈ ಸಾಮಾಜಿಕ ಪರಿವರ್ತನೆಯು ಜಾನಪದವನ್ನು ಮೂಲೆಗುಂಪಾಗಿಸುತ್ತಿದೆ. ಅದೇ ರೀತಿ ತನ್ನ ಮೊದಲಿನ ಶುದ್ಧರೂಪವನ್ನು ಕಳೆದುಕೊಳ್ಳುತ್ತಿರುವುದರಿಂದ ಯಾವುದೇ ಜನಪದ ಅಂಶವು ಅದು ಕಣ್ಮರೆಯಾಗುವ ಮೊದಲು ಅದಕ್ಕೆ ಸಾಂಸ್ಕೃತಿಕ ಮಹತ್ವ ಇದ್ದಾಗಲೇ ಅಧ್ಯಯನ ಮಾಡುವುದರಲ್ಲಿ ಔಚಿತ್ಯವಿದೆ. ಎಲ್ಲಕ್ಕಿಂತ ಹೆಚ್ಚಾಗಿ ಸಮಾಜದಲ್ಲಿ ಇಂದಿಗೂ ಜಾತಿವ್ಯವಸ್ಥೆ ಇದ್ದರೂ ಮೇಲು-ಕೀಳು ಎಂಬ ಮನೋಭಾವನೆ ಇಲ್ಲದೆ ಇಲ್ಲರೂ ಸೇರಿ ಸಹಭೋಜನ ಮಾಡುವ ಈ ಪರಂಪರೆಯ ಅತ್ಯುತ್ತಮ ಪದ್ಧತಿಯಾದ ಪಂಕ್ತಿ ಸೇವೆಯು ಅಧ್ಯಯನಕ್ಕೆ ಹೆಚ್ಚಿನ ಆಸಕ್ತಿ ತೋರಿಸಿದೆ. ಈ ನಿಟ್ಟಿನಲ್ಲಿ ಕ್ಷೇತ್ರಕಾರ್ಯದ ಮೂಲಕ ಮೌಖಿಕ ಸಾಹಿತ್ಯ, ಲಿಖಿತ ಸಾಹಿತ್ಯ ಮತ್ತು ಹಲವಾರು ಮಾಹಿತಿಗಳನ್ನು ಸಂಗ್ರಹಿಸದಿದ್ದರೆ ಆ ಪ್ರದೇಶದಲ್ಲಿರುವ ಎಷ್ಟೋ ಮಾಹಿತಿಗಳು ನಶಿಸಿಹೋಗುತ್ತವೆ. ಆದ್ದರಿಂದ ಕ್ಷೇತ್ರಕಾರ್ಯವು ಮುಖ್ಯವಾಗಿದೆ.[೧]

ಕೃಷಿಯ ಪರಿಕಲ್ಪನೆಯೊಂದಿಗೆ ಜೀವನೋಪಾಯಕ್ಕಾಗಿ ಆಯ್ದುಕೊಂಡ ವೃತ್ತಿಗಳು ಮುಂದೆ ಕುಲಕಸುಬುಗಳಾದವು. ಸಂಪ್ರದಾಯಬದ್ಧ ಸಮಾಜದಲ್ಲಿ ಗ್ರಾಮೀಣ ಕಸುಬುಗಳು ಬಹಳ ಪ್ರಮುಖ ಪಾತ್ರವಹಿಸುತ್ತವೆ. ಜನರಿಗೆ ಮತ್ತು ಕಸಬುದಾರನಿಗೆ ನೇರಸಂಪರ್ಕವಿದ್ದು ಮಾನವನು ಪ್ರಕೃತಿಯಲ್ಲಿ ಏನೇನು ಮಾರ್ಪಾಡು ಮಾಡಿದ್ದಾನೆ. ತನ್ನ ಜೀವನದ ಅವಶ್ಯಕತೆಗಳಿಗೆ ಅನುಗುಣವಾಗಿ ತನ್ನ ಪರಿಸರದಲ್ಲಿ ದೊರೆಯುವ ವಸ್ತುಗಳನ್ನು ಸ್ಥಾಪಿಸಿಕೊಂಡು ಮುಂದುವರಿಯುತ್ತಿದ್ದಾನೆ. ವೃತ್ತಿಯ ಕಲ್ಪನೆಯ ಬಗ್ಗೆ ವೈಜ್ಞಾನಿಕವಾಗಿ ಹಲವಾರು ಸಮಸ್ಯೆಗಳಿದ್ದರೂ ವೃತ್ತಿ ಜೀವನದ ಅಧ್ಯಯನ ವಿಷಯದಲ್ಲಿ ಅದರ ಪ್ರಾಧಾನ್ಯ ಗೋಚರವಾಗುತ್ತವೆ. ಕುಂಬಾರರು ಇಂದಿಗೂ ತಮ್ಮದೇ ಆದಂತಹ ಆಚಾರ-ವಿಚಾರ, ರೂಢಿ ಸಂಪ್ರದಾಯಗಳನ್ನು ಆಚರಿಸುತ್ತಾ ತಮ್ಮ ಹಿಂದಿನವರ ಪರಂಪರೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ನಗರೀಕರಣದಿಂದಾಗಿ ಬದಲಾವಣೆ ಹೊಂದುತ್ತಿದ್ದರೂ ತಮ್ಮದೇ ಆದ ರೀತಿ ರಿವಾಜುಗಳನ್ನು ಉಳಿಸಿಕೊಂಡು ಬರುತ್ತಿದ್ದಾರೆ.

---

೧. ಡಾ. ತೀ.ನಂ.ಶಂಕರನಾರಾಯಣ : ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಪುಟ. ೧೭-೧೮.

ಮಾನವ ಜೀವನದ ಅತ್ಯಂತ ಪ್ರಾಚೀನ ಸಾಧನೆಗಳಲ್ಲಿ ಕುಂಬಾರಿಕೆಯೂ ಒಂದು. ಅಗತ್ಯವಾದ ವೃತ್ತಿ-ಸಾಧಿತ ಕಲೆ. ಪ್ರಪಂಚದ ಅನೇಕ ಪ್ರಾಚೀನ ನಾಗರಿಕತೆಗಳಲ್ಲಿ ತಮ್ಮದೇ ವಿಶಿಷ್ಟ ಬಗೆಯ ಗಡಿಗೆ, ಬಿಂದಿಗೆ, ಮಡಕೆಗಳನ್ನು ತಯಾರಿಸುವ ವೃತ್ತಿ ಕೌಶಲ ಸಿದ್ಧಿಸಿತ್ತು. ಪುರಾತತ್ವ ಸಂಶೋಧಕರು ಈ ಕುಂಭಗಳ ಮಾದರಿ, ಆಕಾರ, ವಿನ್ಯಾಸಗಳನ್ನು ಆಯಾ ಜನಾಂಗದ ಬದುಕಿನ ವಿವಿಧ ಹಂತಗಳ ವಿಕಾಸದ ಪಳೆಯುಳಿಕೆಗಳೆಂದು ಸ್ವೀಕರಿಸಿ, ಅವುಗಳನ್ನು ಆಧರಿಸಿ ಅವು ಯಾವ ಯಾವ ಪ್ರದೇಶದ ಸಾಂಸ್ಕೃತಿಕ ನೆಲೆ, ವಸತಿಗಳಿಗೆ ಸೇರಿದ್ದುವು ಎಂದು ತಿಳಿಯಬಹುದು.

ಜಾನಪದ ಕಣರೆಯಾಗುತ್ತಿದೆ ಎಂಬ ಅಪಾಯದ ಅರಿವಿನಿಂದ ಜಾನಪದದತ್ತ ಆಸಕ್ತಿ ತೋರಲು ಆರಂಬಿಸಿದಾಗ ಜಾನಪದದ ಮೌಖಿಕ ರೂಪಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಯಿತು. ಅದರೆ ಮೌಖಿಕ ಸಾಹಿತ್ಯ ರೂಪಗಳಂತೆಯೇ ಜಾನಪದ ವಸ್ತು ಸಂಸ್ಕೃತಿ ಕೂಡ ಕಣ್ಮರೆಯಾಗುತ್ತಿದೆ. ಅದರತ್ತ ಕೊಡಬೇಕಾದ ಗಮನವನ್ನು ನಾವು ಕೊಡುತ್ತಿಲ್ಲ. ವಸ್ತು ಸಂಸ್ಕೃತಿಯು ಕಣ್ಣಿಗೆ ಕಾಣುವಂತಹ ಪ್ರಕಾರಗಳ ಬಗ್ಗೆ ಗಮನ ಕೇಂದ್ರೀಕರಿಸುತ್ತದೆ. ಇದರಲ್ಲಿ ತಲೆಮಾರಿನಿಂದ ತಲೆಮಾರಿಗೆ ಸಾಗಿಬರುವ ಹಾಗೂ ಮೌಖಿಕ ಜಾನಪದದಂತೆಯೇ ಪರಂಪರೆಯ ಪ್ರಭಾವ ಹಾಗೂ ವೈಯಕ್ತಿಕ ಬದಲಾವಣೆಗಳಿಗೆ ಈಡಾಗುವ ತಂತ್ರ, ಕುಶಲತೆ, ಸೂತ್ರಗಳು ಸೇರುತ್ತವೆ. ವಸತಿ, ಉಡುಗೆ-ತೊಡುಗೆ ಆಹಾರ ತಯಾರಿಕೆ, ಕೃಷಿ ಕೆಲಸ, ಪಶುಸಾಕಣೆ, ಆಹಾರ ಸಂಸ್ಕರಣೆ, ಉಪಕರಣ ತಯಾರಿಕೆ' ಪೀಠೋಪಕರಣ ವಿನ್ಯಾಸ, ಪಾತ್ರೆ, ಪಡಗ ಇತ್ಯಾದಿಗಳ ಬಗ್ಗೆ ವಸ್ತು ಸಂಸ್ಕೃತಿಯ ಅಭ್ಯಾಸಿಗಳು ಗಮನಹರಿಸಬೇಕಾಗುತ್ತದೆ. ಗ್ರಾಮೀಣ ವೃತ್ತಿಗಳ ಅಧ್ಯಯನವು ಈ ಗುಂಪಿಗೆ ಸೇರುತ್ತದೆ.

ಗ್ರಾಮೀಣ ಬದುಕಿನಲ್ಲಿ ಪರಂಪರಾಗತವಾಗಿ ಮುಂದುವರೆದುಕೊಂಡು ಬರುವಂಥ ವೃತ್ತಿಗಳನ್ನು ಗ್ರಾಮೀಣ ವೃತ್ತಿಗಳು ಜಾನಪದ ಕಸುಬುಗಳು ಎನ್ನಬಹುದು. ಈ ವೃತ್ತಿಗಳಲ್ಲಿ ಮಾನವ ಶ್ರಮವೇ ಮುಖ್ಯವಾಗಿದ್ದು ಕೆಲಸಕ್ಕೆ ಅನಿವಾರ್ಯವಾದಂಥ ಒಂದೆರಡು ಸರಳಯಂತ್ರಗಳನ್ನು . ರೂಪಿಸಿಕೊಂಡಿರುವುದರಿಂದ ಇವುಗಳನ್ನು ಕೈಕಸಬುಗಳು ಎಂತಲೂ ಕರೆಯುತ್ತಾರೆ.

ಕೃಷಿಯ ಪರಿಕಲ್ಪನೆಯೊಂದಿಗೆ ಗ್ರಾಮೀಣ ವೃತ್ತಿಗಳು ಹುಟ್ಟಿ ಬೆಳೆದುಕೊಂಡು ಬಂದವು. ಸ್ಥಿರವಸತಿ ಆರಂಭಗೊಂಡು ಜೀವನೋಪಯಕ್ಕಾಗಿ ಆಯ್ದುಕೊಂಡ ವೃತ್ತಿಗಳು ಮುಂದೆ ಕುಲಕಸಬುಗಳಾದವು. ಕೈಗಾರಿಕಾ ಕ್ರಾಂತಿಗೆ ಮೊದಲು ಸಂಪ್ರದಾಯಬದ್ಧ ಸಮಾಜದಲ್ಲಿ ಗ್ರಾಮೀಣ ಕಸುಬುಗಳು ಬಹಳ ಪ್ರಮುಖ ಪಾತ್ರವಹಿಸುತ್ತಿದ್ದವು. ವ್ಯಕ್ತಿ ತನಗೆ ಬೇಕಾದ ಆದರೆ ಸ್ವತಃ ತಾನೇ ತಯಾರಿಸಲಾಗದ

ಪರಿಕರಗಳನ್ನು ಕಸುಬುದಾರನಿಂದ ಪಡೆದುಕೊಳ್ಳುತ್ತಿದ್ದ. ಆತನೊಂದಿಗೆ ಜನರಿಗೆ ನೇರ ಸಂಪರ್ಕವಿರುತ್ತಿತ್ತು. ಕೈಗಾರಿಕಾ ಕ್ರಾಂತಿಯ ನಂತರ ಅನೇಕ ಸಾಂಸ್ಕೃತಿಕ, ಸಾಮಾಜಿಕ ಬದಲಾವಣೆಗಳಾದವು. ಕಾರ್ಖಾನೆಯಿಂದ ಸಿದ್ಧವಸ್ತುಗಳು ಕಡಿಮೆ ಬೆಲೆಗೆ ಧಾರಾಳವಾಗಿ ಸರಬರಾಜಾಗತತೊಡಗಿದಂತೆ ಸಮಾಜದ ಕೈಕಸುಬುಗಳಲ್ಲಿ ಪ್ರಾಧಾನ್ಯತೆ ಕಡಿಮೆಯಾಯಿತು. ವೃತ್ತಿಜೀವನದ ಸ್ವರೂಪ ಸಂಪೂರ್ಣ ಬದಲಾಯಿಸಿತು. ಈಗ ಒಂದೆರಡು ವೃತ್ತಿಗಳನ್ನು ಬಿಟ್ಟರೆ ಉಳಿದುದೆಲ್ಲ ಅವಸಾನದ ಹಾದಿಯಲ್ಲಿವೆ. ಇವುಗಳ ಕಾರ್ಯಸೂತ್ರಗಳು, ತಂತ್ರಗಳು, ವಿನ್ಯಾಸಗಳು, ಬಳಕೆಯ ವಸ್ತುಗಳು ವಿಶಿಷ್ಠ ಪರಿಭಾಷೆ ಎಲ್ಲವೂ ಅಳಿದು ಹೋಗುತ್ತಿವೆ. ನಮ್ಮ ಜನರು ತಲೆತಲೆಮಾರುಗಳ ಅನುಭವದಿಂದ ರೂಢಿಸಿಕೊಂಡ ಈ ಜ್ಞಾನಭಂಡಾರವನ್ನು ಗ್ರಾಮೋದ್ಯೋಗ ಪರಿಸರ ರಕ್ಷಣೆ ಮುಂತಾದ ದೃಷ್ಟಿಯಿಂದಲೂ ಕಾಪಾಡಿಕೊಳ್ಳುವುದು ಅತ್ಯಗತ್ಯವಾಗಿದೆ.

ಕುಂಭಗಾರಿಕೆಯನ್ನು ಬಹು ಪ್ರಾಚೀನ ವೃತ್ತಿ ಎಂದು ವಿದ್ವಾಂಸರು ಪರಿಗಣಿಸುತ್ತಾರೆ. ಇದು ಸಾರ್ವತ್ರಿಕವಾಗಿ ಕಂಡುಬರುವಂಥ ವೃತ್ತಿಯೂ ಹೌದು. ಶತಶತಮಾನಗಳಿಂದಲೂ ಇದರಲ್ಲಿ ಹೆಚ್ಚಿನ ಬದಲಾವಣೆಗಳು ಕಂಡುಬಂದಿಲ್ಲ. ಎಲ್ಲೆಲ್ಲಿ ಸೂಕ್ತ ಮಣ್ಣು ಸಿಗುವುದೋ ಅಲ್ಲಲ್ಲಿನ ಮಣ್ಣು ಬಳಸಿ ಕುಂಭಕಾರಿಕೆ ನಡೆಯಿತು. ಕುಂಭಗಾರಿಕೆಯನ್ನು ಕುರಿತ ಜನಪದ ಸಾಹಿತ್ಯವೂ ಸಾಕಷ್ಟಿದೆ. ಅಲ್ಲಿ ಇದನ್ನು ನೇರವಾಗಿಯೂ ಸಾಂಕೇತಿಕವಾಗಿಯೂ ಉಲ್ಲೇಖಿಸಲಾಗಿದೆ. ಇಟ್ಟಿಗೆ ಮತ್ತು ಹಂಚು ತಯಾರಿಕೆಗಳನ್ನು ಸಹ ಕುಂಭಕಾರಿಕೆಯ ಸಂದರ್ಭದಲ್ಲಿ ಪರಿಶೀಲಿಸಬಹುದು.

ಈ ವಿಷಯವನ್ನು ನಿಬಂಧದ ವಿಷಯವಾಗಿ ತೆಗೆದುಕೊಳ್ಳಲು ಕಾರಣ-ವೇನೆಂದರೆ ಗ್ರಾಮೀಣ ವೃತ್ತಿ ಬದುಕಿನಲ್ಲಿ ಆಸಕ್ತಿ. ವೃತ್ತಿ ಎಂಬುದು ಮಾನವ ವರ್ಗಕ್ಕೆ ಸೀಮಿತವಾದ ವಿಷಯ. ಗ್ರಾಮೀಣ ಬದುಕಿನಲ್ಲಿ ಪರಂಪರಗತವಾಗಿ ಮುಂದುವರಿದು-ಕೊಂಡು ಬರುವಂತಹ ವೃತ್ತಿಗಳನ್ನು ಗ್ರಾಮೀಣ ವೃತ್ತಿಗಳು ಅಥವಾ ಜನಪದ ಕಸಬುಗಳು ಎಂದು ಕರೆಯುವುದು ವಾಡಿಕೆ. ಈ ವೃತ್ತಿಗಳಲ್ಲಿ ಮಾನವನ ಶ್ರಮವೇ ಮುಖ್ಯವಾಗಿದ್ದು ಕೆಲಸಕ್ಕೆ ಅನಿವಾರ್ಯವಾದ ಒಂದೆರಡು ಸರಳ ಯಂತ್ರಗಳನ್ನು ಮಾನವರೇ ಸ್ವತಃ ರೂಪಿಸಿಕೊಂಡಿರುವುದರಿಂದ ಇವುಗಳನ್ನು ಕೈಕಸುಬುಗಳು ಎಂಥಲೂ ಕರೆಯುತ್ತಾರೆ.

ಗ್ರಾಮೀಣ ವೃತ್ತಿಗಳಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಅವುಗಳ ಪಾರಂಪರಿಕ ಅಂಶ. ಪ್ರತಿಯೊಂದು ವೃತ್ತಿಗಳು ಅದಕ್ಕೆ ವಿಶಿಷ್ಟವಾದ ಕಚ್ಚಾ-ಸಾಮಾಗ್ರಿಗಳು, ಸಂಸ್ಕರಣ ವಿಧಾನಗಳು, ತಯಾರಿಕಾ ಸೂತ್ರಗಳು, ವಿನ್ಯಾಸಗಳು, ಪರಿಸ್ಕರಣ ವಿಧಾನಗಳು ಮತ್ತು ಕೆಲಸದ ಗುಣಮಟ್ಟವನ್ನು ನಿಷ್ಕರ್ಷಿಸುವ ಮಾನದಂಡಗಳು ಇರುತ್ತವೆ. ಕೆಲಸದ ತರಬೇತಿ ವಿಧಾನವೂ ಆಯಾ ವೃತ್ತಿಗೆ

ವಿಶಿಷ್ಟವಾಗಿರುತ್ತದೆ. ಈ ವೃತ್ತಿಗಳಲ್ಲಿ ಕುಟುಂಬದ ಗಂಡಸರು, ಹೆಂಗಸರು ಬೇರೆ ಬೇರೆ ವಯೋಮಾನದವರು ನಿಗದಿತ ರೀತಿಯಲ್ಲಿ ಭಾಗಿಯಾಗುತ್ತಾರೆ. ವೃತ್ತಿಗೆ ಎದುರಾಗುವ ತೊಡಕು–ತೊಂದರೆಗಳು ಆಯಾವೃತ್ತಿಗೆ ವಿಶಿಷ್ಟವಾಗಿರುತ್ತವೆ.

ಜೀವನಾವಶ್ಯಕ ಉಪಕರಣಗಳನ್ನು ತಯಾರಿಸುವ ಕಸುಬುಗಳನ್ನು ಸಾಮಾನ್ಯವಾಗಿ ಎಲ್ಲ ಪ್ರದೇಶಗಳಲ್ಲೂ ಸಮಾನವಾಗಿ ಕಾಣಬಹುದು. ಕುಂಭಕಾರಿಕೆ, ಬಡಗಿತನ, ಕಮ್ಮಾರಿಕೆ ಇಂಥವು. ಇವು ಪ್ರತಿಯೊಂದು ಗ್ರಾಮದಲ್ಲೂ ಇದ್ದು ಸ್ಥಳೀಯರ ಅಗತ್ಯತೆಗಳನ್ನು ಪೂರೈಸುತ್ತಿರುತ್ತವೆ. ಆದರೆ ಕೆಲವೊಂದು ವೃತ್ತಿಗಳು ಆಯಾ ಪ್ರದೇಶದಲ್ಲಿ ಲಭ್ಯವಿರುವ ಕಚ್ಚಾ ಸಾಮಾಗ್ರಿಯನ್ನು ಅವಲಂಬಿಸಿ, ವಿಷಯವಾಗಿ ಬೆಳೆದಿರುತ್ತದೆ. ಕುಂಬಾರರ ವೃತ್ತಿಗಳು ಸಾಮಾಜಿಕ ಜೀವನದಲ್ಲಿ ಜೀವನದಲ್ಲಿ ಇಂತಹ ವೃತ್ತಿಗಳು ಸಾಮಾಜಿಕ ಜೀವನಾವಶ್ಯಕ ವೃತ್ತಿಗಳಿಗಿಂತ ಭಿನ್ನವಾಗಿರಲು ಸಾಧ್ಯ. ಎಲ್ಲಾ ವೃತ್ತಿಗಳೂ ಕಾಲದ ದೃಷ್ಟಿಯಿಂದ ಒಂದೇ ಆಗಿಲ್ಲ. ಕೆಲವು ಪುರಾತನ, ಕೆಲವು ಮಧ್ಯಕಾಲೀನ, ಕೆಲವು ಆಧುನಿಕ ಪ್ರತಿಯೊಂದು ವೃತ್ತಿಯ ಉಗಮ ಹಾಗೂ ಕಾಲಾನುಕ್ರಮದಲ್ಲಿ ಅವು ಬೆಳೆದು ಬಂದ ಬಗೆ, ಬದಲಾವಣೆಗಳನ್ನು ಸಹ ವೃತ್ತಿ ಜಾನಪದ ಸಂದರ್ಭದಲ್ಲಿ ಅಭ್ಯಾಸ ಮಾಡಬೇಕು.

೧೯ನೇ ಶತಮಾನದ ಕೊನೆಯಲ್ಲಿ ಸ್ವತಂತ್ರ ಅಸ್ತಿತ್ವವನ್ನು ಪಡದುಕೊಂಡ ಜನಪದವು ಗ್ರಂಥಸ್ಥ ಮೂಲದಿಂದ ಬಂದುದಲ್ಲ. ಅದು ಪರಂಪರಾನುಗತವಾಗಿ ಮೌಖಿಕ ಸಂಪ್ರದಾಯದಲ್ಲಿ ಸಾಗಿಬಂದುದಾಗಿದೆ. ಈ ಸಾಹಿತ್ಯ ಕೇವಲ ಅಶಿಕ್ಷಿತ ಸಮೂಹ, ಆದಿವಾಸಿ ಗುಂಪು ಅಥವಾ ಗ್ರಾಮಾಂತರವಾಸಿಗಳ ಜೀವನಕ್ಕೆ ಮಾತ್ರ ಸೀಮಿತವಾದುದಲ್ಲ. ಅದರ ವ್ಯಾಪ್ತಿ ನಗರ ಆವರಣಕ್ಕೂ ವಿಸ್ತರಿಸಿರುವುದನ್ನು ಕಾಣಬಹುದಾಗಿದೆ.

ಇಡೀ ಪ್ರಪಂಚದ ಸಂಸ್ಕೃತಿಯ ಬೇರು ಹುದುಗಿರುವುದು ಜನಪದರಲ್ಲಿ. ಆದ್ದರಿಂದಲೇ "ಜನವಾಣಿ ಬೇರು, ಕವಿವಾಣಿ ಹೂವು" ಎಂದು ಹೇಳಿರುವುದು ಸಮಂಜಸವಾಗಿದೆ. ಈ ಜನಫದ ಸಾಹಿತ್ಯವು ಕಣ್ಮನಗಳಿಗೆ ಆನಂದವನ್ನು ಕೊಡುವುದಷ್ಟೇ ಅಲ್ಲದೇ ಅದರ ಹಿಂದೆ ತಾತ್ತ್ವಿಕತೆಗಳು, ಬದುಕಿನ ರೀತಿ–ನೀತಿಗಳು ಇರುವುದನ್ನು ಕಾಣಬಹುದು.

ಮಾನವ ನಾಗರಿಕತೆ ಕೆಲವೊಂದು ಪ್ರದೇಶಗಳಲ್ಲಿ ಉಜ್ವಲವಾಗಿ ಬೆಳೆದು ಬಂದಿತೆಂದು ಮಾತ್ರ ಹೇಳಬಹುದು. ಹರಪ್ಪಾ ಮೆಹೆಂಜೋದಾರೋ, ಈಜಿಪ್ಟ್, ಬೆಬಿಲೋನಿಯಾ, ಮೆಕ್ಸಿಕೊ ಮೊದಲಾದ ಪ್ರದೇಶಗಳ ಪ್ರಾಚೀನ ನಾಗರಿಕತೆಯಲ್ಲಿ 'ಕುಂಭಕಲೆ' ಬಹಳ ಉನ್ನತ ಸ್ಥಿತಿಯಲ್ಲಿದ್ದುದು ಕಂಡುಬರುತ್ತದೆ. ಪಿಂಗಾಣಿ ಪಾತ್ರೆಯ

ಕಲೆಯಲ್ಲಿ ಚೀನಾ ಜಗತ್ಪ್ರಸಿದ್ಧವಾಗಿರುವುದು ತಿಳಿಯದವರಿಲ್ಲ. ನಮ್ಮ ದೇಶದಲ್ಲೂ ಕಸುಬು ಕುಲಕ್ಕಂಟಿಕೊಂಡಿರುವುದು ಹೊಸದೇನಲ್ಲ. ಮಣ್ಣಿನ ಮೇಲೆ ಕೈಯಾಡಿಸಿ ಅದಕ್ಕೆ ಉಪಯೋಗದ ಕಳೆಕೊಡುವ ವೃತ್ತಿಗಂಟಿದ ಸಮುದಾಯ ಕುಂಬಾರ ಜನಾಂಗವಾಗಿ ಮೂಡಿಬಂತು. ಗಾವಿಲನಿಂದ ವಿದ್ವಾಂಸನವರೆಗೂ ಕುಂಬಾರ ಚಿರಪರಿಚಿತ. ಅವನು ನಿರ್ಮಿಸಿದ ಮಡಕೆ, ಹರವಿ ಎಲ್ಲವೂ ಜನೋಪಯುಕ್ತವಾಗಿದ್ದು ಅದರಲ್ಲೂ ಬಡವರಿಗೆ ಆಧಾರವಾದವು.

ಬೆಂಕಿ ಚಕ್ರದ ಆವಿಷ್ಕಾರದ ನಂತರ ಬೇಸಾಯವನ್ನು ಕಂಡುಕೊಂಡ ಪ್ರಾಚೀನ ಮಾನವ ಒಂದೆಡೆ ನೆಲಸಲಾರಂಭಿಸಿದ. ಕ್ರಮೇಣ ಬೇಯಿಸಿದ ಆಹಾರವನ್ನು ತಿನ್ನುವುದಕ್ಕೂ ಕಲಿತ ಮಾನವನಿಗೆ ಆಹಾರವನ್ನು ಬೇಯಿಸಲು ಮಡಕೆಗಳ ಅವಶ್ಯಕತೆ ತಲೆದೋರಿತು. ಮೊದಮೊದಲು ಸುಡದೆ ಇರುವ ಮಡಕೆಗಳನ್ನು ತನ್ನ ನಿತ್ಯ ಬಳಕೆಯ ಹಣ್ಣುಹಂಪಲುಗಳನ್ನು ಗೆಡ್ಡೆಗೆಣಸುಗಳನ್ನು ಸಂಗ್ರಹಿಸಿಡಲು ಬಳಸುತ್ತಿದ್ದ ಆಹಾರವನ್ನು ಬೇಯಿಸುವ ಕಲೆಯನ್ನು ತಿಳಿದುಕೊಂಡ ಮೇಲೆ ಸುಟ್ಟಮಡಕೆಗಳ ಬಳಕೆ ಆರಂಭವಾಯಿತು. ಇದು ವಿಶ್ವದ ಇಂತಹುದೇ ಪ್ರದೇಶದಲ್ಲಿ ಬೆಳೆದು ಬಂತೆಂತು ಬೊಟ್ಟುಮಾಡಿ ಹೇಳುವುದು ಸಾಧ್ಯವಿಲ್ಲ.

ಜಾನಪದವು ಆಚರಣೆ, ನಂಬಿಕೆ, ಸಂಪ್ರದಾಯ ಇತ್ಯಾದಿಗಳ ಮೂಲಕ ಮಾನವ ಸಂಸ್ಕೃತಿಯನ್ನು ಪ್ರತಿಬಿಂಬಿಸುವುದರಿಂದ, ಮಾನವರ ಸಂಸ್ಕೃತಿ ಮತ್ತು ಸಮಾಜವನ್ನು ಕುರಿತು ಅಭ್ಯಾಸ ಮಾಡುವಲ್ಲಿ ಜಾನಪದ ಸಾಹಿತ್ಯ ಬಹಳ ಪ್ರಮುಖವಾದುದು. ಜಾನಪದ ಸಾಹಿತ್ಯವು ಬರಿದಾಗದ ಅಕ್ಷಯ ಪಾತ್ರೆಯಂತೆ, ಎಷ್ಟು ಮಾಡಿದರು ಮುಗಿಯದ, ಮುಗಿಸಲಾಗದ ಕಾರ್ಯವಾಗಿದೆ. ಸಂಗ್ರಹ, ಸಂಶೋಧನೆ, ವಿಮರ್ಶೆ, ಸಾಹಿತ್ಯ, ಕಲೆ, ಪುರಾಣ, ಸಂಪ್ರದಾಯ ಹೀಗೆ ಜಗತ್ತಿನಾದ್ಯಂತ ಹಲವಾರು ಜಾನಪದ ಚಟುವಟಿಕೆಗಳು ಸರ್ವತೋಮುಖವಾಗಿ ನಡೆದಿವೆ, ನಡೆಯುತ್ತಲೇ ಇವೆ.

ಮಾನವನ ಸಾಂಸ್ಕೃತಿಕ ಕ್ಷೇತ್ರದಲ್ಲಿ ಜನಪದವು ಅತ್ಯಂತ ಮುಖ್ಯವಾದುದು. ಜನಪದ ಒಂದು ಜೀವಂತ ಪಳೆಯುಳಿಕೆ. ಇದಕ್ಕೆ ಸಾವಿಲ್ಲ ಮತ್ತು ಇದು ನಿಂತ ನೀರಲ್ಲ, ಸದಾ ಹರಿಯುವ ನೀರು. ಆದ್ದರಿಂದ ಜನಪದವನ್ನು ನಿತ್ಯ ಪರಿವರ್ತನ ಶೀಲವೆಂದು ಕರೆಯಬಹುದು. ಇಂತಹ ಸಾಹಿತ್ಯದ ಅಧ್ಯಯನದಿಂದ ಹಳ್ಳಿಗರ ಸರಳ ಜೀವನ, ಮೋಸ, ವಂಚನೆ, ಕಪಟವರಿಯದ ನಿರ್ಮಲ ಹೃದಯ, ಅವರ ಮುಗ್ಧತೆ ಎಲ್ಲವೂ ತಿಳಿದುಬರುತ್ತದೆ.

ಕುಂಬಾರರ ಸಾಂಸ್ಕೃತಿಕ ಅಧ್ಯಯನವನ್ನು ಮಾಡುವುದರಿಂದ ಕಾಲಘಟ್ಟದಲ್ಲಿ ಅಲ್ಲಿನ ವೃತ್ತಿಯ ಹಾಗೂ ಸಾಂಸ್ಕೃತಿಕ ನೆಲೆಯನ್ನು ಗುರುತಿಸಬಹುದು. ಅಧ್ಯಯನದ ದೃಷ್ಟಿಯಿಂದ ಪ್ರಸ್ತುತ ನಿಬಂಧದಲ್ಲಿ ಕುಂಬಾರರ ಸಾಂಸ್ಕೃತಿಕ ಅಧ್ಯಯನವನ್ನು ಈ ಹಿಂದೆ ಯಾರೂ ಅಧ್ಯಯನವನ್ನು ಕೈಗೊಂಡಿಲ್ಲ. ಆದ್ದರಿಂದ ಅಧ್ಯಯನದ ದೃಷ್ಟಿಯಿಂದ ದೂರಾ ಗ್ರಾಮದ ಕುಂಬಾರರ ಸಾಂಸ್ಕೃತಿಕ ಅಧ್ಯಯನವನ್ನು ಅವರ ಕಸುಬು, ಆಚಾರ–ವಿಚಾರ, ರೀತಿ–ನೀತಿಗಳು, ಸಂಪ್ರದಾಯಗಳು, ಮದುವೆ, ಹಬ್ಬಹರಿದಿನಗಳು, ನಿಷೇಧಗಳು ಹೀಗೆ ಅವರು ಮಾಡುವ ಸಾಂಸ್ಕೃತಿಕ ವಿಧಿವಿಧಾನಗಳು, ಕುಟುಂಬ ವ್ಯವಸ್ಥೆ, ಆಡಳಿತ ವ್ಯವಸ್ಥೆಗಳ ಬಗ್ಗೆ ತಿಳಿಸಿದೆ. ಇದರ ಜೊತೆಗೆ ಅವರ ವೃತ್ತಿಯಲ್ಲಿ ಬಳಸುವ ಸಾಧನ ಸಾಮಾಗ್ರಿಗಳು ಕಚ್ಚಾವಸ್ತುಗಳು ಕುಂಬಾರಿಕೆಯಿಂದ ತಯಾರಿಸಲಾಗುವ ವಿವಿಧ ಬಗೆಯ ಪಾತ್ರೆಗಳು ಮತ್ತು ವಸ್ತು ಈ ವೃತ್ತಿಗೆ ಎದುರಾಗುವ ಅಡ್ಡಿ ಆತಂಕಗಳ ಬಗ್ಗೆ ವಿವರಿಸುತ್ತಾ ಸಮರೋಪದಲ್ಲಿ ಈ ಪ್ರಸ್ತುತ ಅಧ್ಯಯನವನ್ನು ಐದು ಅಧ್ಯಯವನ್ನಾಗಿ ಮಾಡಿಕೊಂಡಿರುತ್ತೇನೆ. ಅನಂತರ ಈ ನಿಬಂಧ ರಚನೆಯಲ್ಲಿ ಬಳಸಿಕೊಂಡ ಸಹಾಯಕ ಗ್ರಂಥಗಳ ಪಟ್ಟಿಯನ್ನು ಕೊಡಲಾಗಿದೆ.

ಕುಂಬಾರರ ಕುಂಭಕಲೆ ಇಂದೂ ಕಣ್ಮರೆಯಾಗುತ್ತಿರುವ ಈ ಸಂದರ್ಭದಲ್ಲಿ ವೃತ್ತಿಯಲ್ಲಿ ಹೊಸಮಾದರಿಯ ಪ್ರವೇಶ ಅದರ ಕಸುಬುದಾರಿಕೆಯನ್ನು ಖಂಡಿತ ಬೆಳೆಸಬಹುದು. ಹೊಸ ಮಾದರಿಯ ಗಡಿಗೆಗಳ ತಯಾರಿಕೆ ತರಬೇತಿ, ಅಕ್ಷರಸ್ಥ ಮತ್ತು ನಿರುದ್ಯೋಗಿ ಯುವಕರಿಗೆ ಕುಂಬಾರಿಕೆಯಲ್ಲಿ ಆಸಕ್ತಿ ಮೂಡಿಸುವುದು. ಸಣ್ಣ ಕೈಗಾರಿಕೆ ಮತ್ತು ಗುಡಿಕೈಗಾರಿಕೆಯ ಇಲಾಖೆಯಿಂದ ಆರ್ಥಿಕ ನೆರವು ನೀಡುವುದು, ಕುಂಬಾರಿಕೆಗೆ ನಿಗದಿತ ಮಾರುಕಟ್ಟೆ, ಗೋದಾಮು ಮತ್ತು ನಿಗದಿತ ಬೆಲೆ ಒದಗಿಸುವುದು ಕುಂಬಾರರ ಸಹಕಾರಿ ಸಂಘಗಳು ಮತ್ತು ಕುಲಾಲ ಸಂಘಗಳು ವೃತ್ತಿ ಮತ್ತು ಸಮಾಜದ ಏಳಿಗೆಗೆ ಶ್ರಮಿಸುವುದು. ಕುಂಬಾರರು ನಶಿಸಿಹೋಗುತ್ತಿರುವ ಕಾರ್ಯಕ್ಷಮತೆಯನ್ನು ಹೆಚ್ಚಿಸಿ–ಕೊಂಡರೆ ಅಭಿವೃದ್ಧಿ ಪಥಕ್ಕೇರಲು ಸಾಧ್ಯ.

# ಅಧ್ಯಾಯ - ೨

# ಕುಂಬಾರರ ಮೂಲ ಮತ್ತು ಪ್ರಾಚೀನತೆ

ಕುಂಬಾರ ಎಂದರೆ ಸಾಮಾನ್ಯವಾಗಿ ಮಡಿಕೆ ಮಾಡುವವರು ಎಂದು ಜನಸಾಮಾನ್ಯರು ಅರ್ಥಮಾಡಿಕೊಳ್ಳುತ್ತಾರೆ. ಕುಂಬಾರ ಸಂಸ್ಕೃತದ ಪದ **'ಕುಂಭಕಾರ'** ಎಂಬುದರ ಅಪಭ್ರಂಶವಾಗಿದೆ. ಮಣ್ಣಿನಿಂದ ಉಪಯುಕ್ತವಾದ ವಸ್ತುಗಳನ್ನು ತಯಾರಿಸುವ ಒಂದು ಜನಾಂಗವೇ ಈ ಕುಂಬಾರ. ವೈದಿಕ ವಾಙ್ಞಯದಲ್ಲಿ ಹೇಳುವ ನಾಯಿಂದ, ಕಮ್ಮಾರ, ಕಥೆಗಾರ, ಸೂತ, ವೈಶ್ಯ ಮುಂತಾದ ವೃತ್ತಿಗಳಲ್ಲಿ ಕುಂಬಾರನು ಒಬ್ಬನು ಆಯಗಾರರಲ್ಲಿ ಇರುವ ಸ್ಥಾನಮಾನ ಅತ್ಯಂತ ಮಹತ್ವವಾಗಿದೆ. ಯಾವುದೇ ಊರು ಕುಂಬಾರ/ಕುಂಬಾರಿಕೆ ಇಲ್ಲದೆ ಪರಿಪೂರ್ಣವಲ್ಲ ಎನ್ನುವುದು ನಮ್ಮ ಜನಪದ ಕವಿ ಸರ್ವಜ್ಞನ[೧] ಅನುಭವ.

"ಅಂಬು ಬಿಲ್ಲಿಗೆ ಲೇಸು ಇಂಬು ಕೋಣೆಗೇ ಲೇಸು
ಸಂಬಾರ ಲೇಸು ಸಾರಿಗೂ ಊರಿಂಗೆ
ಕುಂಬಾರ ಲೇಸು ಸರ್ವಜ್ಞ".

ಬಿಲ್ಲಿಗೆ ಅಂಬು, ಕೋಣೆಗೆ ಇಂಬು, ಸಾರಿಗೆ ಸಾಂಬಾರ ಎಷ್ಟು ಮುಖ್ಯವೋ ಅಷ್ಟೇ ಮುಖ್ಯ ಒಂದು ಊರಿಗೆ ಕುಂಬಾರ. ಅನಾದಿ ಕಾಲದಿಂದಲೂ ನಮ್ಮ ಜನಾಂಗದ ಬದುಕಿನ ಅವಿಭಾಜ್ಯ ಅಂಗವಾಗಿ ಬೆಳೆದುಬಂದ ಕುಂಬಾರ ಎನ್ನುವ ಶಬ್ದಕ್ಕೆ ಕುಲಾಲ, ಚಕ್ರಿ, ದಂಡಧರ, ಕುಂಭಕಾರ, ಆಯಾಸವಂತ ಎಂಬ ಮುಂತಾದ ಅರ್ಥಗಳನ್ನು ಕಾಣುತ್ತೇವೆ. ಶಿವಪಥವನ್ನು ಅರಿಯಲು, ಸಾಧಿಸಲು ಗುರುಪಥವೇ ಮೊದಲು ಎಂದು ಸಾರಿದ ಬಸವಣ್ಣನವರು ತಮ್ಮ ಈ ಅನುಭಾವಕ್ಕೆ ಸಾದೃಶ್ಯಗಳನ್ನು ಕೊಡುವಾಗ "ಮಡಕೆಯ ಮಾಡುವರೆ ಮಣ್ಣೇ ಮೊದಲು ಎನ್ನುವರು. ಮಣ್ಣು ಅದರಿಂದ ಮಾಡುವ ಮಡಕೆಯ ಹಿಂದೆ ಕುಂಬಾರನ ಹಿರಿಮೆ ಇಲ್ಲಿ ಧ್ವನಿತವಾಗಿದೆ ಎಂಬುದು ಸ್ಪಷ್ಟ".

'ಕುಂಬಾರ' ಎನ್ನುವುದು 'ಕುಂಭಕಾರ' ಎಂಬ ಶಬ್ದದ ತದ್ಭವ ರೂಪ. ಕುಂಬಾರನನ್ನು ತಮಿಳುನಾಡಿನಲ್ಲಿ 'ಕುಸವನ್' ಎಂದು ಕರೆದರೆ, ಉತ್ತರ ಭಾರತದಲ್ಲಿ 'ಪ್ರಜಾಪತಿ' ಎನ್ನುತ್ತಾರೆ. ಕರ್ನಾಟಕದ ಉತ್ತರ ಭಾಗದಲ್ಲಿ ಲಿಂಗಾಯಿತ ಕುಂಬಾರ, ಕುಮಾರ ಪ್ರಜಾಪತಿ, ಕುಂಬಾರಶೆಟ್ಟಿ ಎಂಬ ಹೆಸರುಗಳು ರೂಢಿಯಲ್ಲಿವೆ. ಮೈಸೂರಿನ

---

೧. ಸರ್ವಜ್ಞನನ ತಂದೆ-ತಾಯಿಗಳ ವಿಷಯದಲ್ಲಿ ಐತಿಹ್ಯವನ್ನು ಬದಿಗಿರಿಸಿ, ಆತ ನಮ್ಮ ಜನಪದ ಕಾವ್ಯಪರಂಪರೆಯನ್ನು ಎತ್ತಿಹಿಡಿದ ಸತ್ವಶಾಲಿ ಜನಪ್ರಿಯ ಕವಿ ಎನ್ನುವ ದೃಷ್ಟಿಯಿಂದ ಆತನ ಅನುಭವವನ್ನು ಬಳಸಿಕೊಳ್ಳಲಾಗಿದೆ.

ಕುಂಬಾರರಲ್ಲಿ ಕನ್ನಡ ಕುಂಬಾರರು ಮತ್ತು ಲಿಂಗಾಯಿತ ಕುಂಬಾರರು ಎನ್ನುವ ಎರಡು ಪಂಗಡಗಳಿವೆ. ದಕ್ಷಿಣ ಕನ್ನಡದಲ್ಲಿ 'ಮೂಲ್ಯ' ಅಥವಾ 'ಕುಲಾಲ' ಎನ್ನುವುದು ವಾಡಿಕೆಯಾದರೆ ಉತ್ತರ ಕನ್ನಡದಲ್ಲಿ 'ಗುಣಗರು' ಮತ್ತು 'ಹಾಂಡ' ಎಂಬ ನಾಮದಿಂದ ಕರೆಯಿಸಿಕೊಳ್ಳುತ್ತಾರೆ. ಧಾರವಾಡ ಜಿಲ್ಲೆಯಲ್ಲಿ ಕುಂಬಾರನನ್ನು 'ಚಕ್ರಸಾಲಿ'ಗಳೆನ್ನುತ್ತಾರೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಕುಂಬಾರನನ್ನು 'ಗುನಗ' ಎಂದು ಕರೆಯುತ್ತಾರೆ. ಇವರು ಗ್ರಾಮದೇವತೆಯ ಅರ್ಚಕರು. ಇವರು ದೇವತೆಗಳ ಗುಣಗಾನ ಮಾಡುತ್ತಿದ್ದರಿಂದ 'ಗುನಗ' ಎಂದು ಹೆಸರು ಬಂದಿದೆ ಎಂದು ಹೇಳುತ್ತಾರೆ. ಇವರು ಶುದ್ಧ ಕನ್ನಡ ಮಾತನಾಡುತ್ತಾರೆ.

ಪುರಾಣಕಥೆ, ಐತಿಹ್ಯ ದಂತಕಥೆಗಳ ಆಗರವಾದ ಭಾರತದಲ್ಲಿ ಕುಂಬಾರನನ್ನು ಕುರಿತು ಕೆಲವು ಕಥೆಗಳು ದೊರೆಯುತ್ತವೆ.

"ವರ್ಣಾಶ್ರಮ ಪದ್ಧತಿಯ ನಾಲ್ಕು ಜಾತಿಗಳ ಮಿಶ್ರಣ ವಿವಾಹದಿಂದ ಈ 'ಕುಂಬಾರ' ಉಪಜಾತಿ ಹುಟ್ಟಿತು ಎನ್ನುವುದು ಕೆಲ ವಿದ್ವಾಂಸರ ಅಭಿಪ್ರಾಯ. ಭಾರತದ ಪ್ರಾಚೀನ ಬರಹಗಳಲ್ಲಿ ದೊರಕುವ ಅಂಶಗಳನ್ನು ಗಮನಿಸಿದ ಸರ್ ಎಚ್.ರಿಜ್ಲೇ ಈ ಜಾತಿಯ ಮೂಲವನ್ನು ಕುರಿತು ಪಾರಂಪರಿಕ ಪಿತೃತ್ವದ ಬಗೆಗೆ ಸಾಕಷ್ಟು ಭಿನ್ನಾಬಿಪ್ರಾಯಗಳಿವೆ ಎಂದು ಹೇಳುತ್ತಾರೆ. ಬ್ರಹ್ಮವೈವೃತ್ತ ಪುರಾಣದ ಪ್ರಕಾರ ಕುಂಬಾರನ ತಾಯಿ ವೈಶ್ಯರ ಕುಲದವಳು. ತಂದೆ ಬ್ರಾಹ್ಮಣ ಪರಾಶರ ಸಂಹಿತೆಗೆ ಅನುಗುಣವಾಗಿ ತಂದೆ ಹೂಗಾರ, ತಾಯಿ ಗಾಣಿಗರ ಒಂದು ಉಪಜಾತಿಯವಳು. ಸರ್. ವಿಲಿಯಮ್ ಮೊನಿಯರ್ ತಮ್ಮ ಸಂಸ್ಕೃತ "ಶಬ್ದಕೋಶ"ದಲ್ಲಿ ಕುಂಬಾರ ಕುಲದ ತಾಯಿ 'ಕ್ಷತ್ರಿಯಳು'. ತಂದೆ 'ಬ್ರಾಹ್ಮಣ' ಎಂದು ವಿವರಿಸಿದ್ದಾರೆ. ಈ ಎಲ್ಲಾ ಭಿನ್ನಾಭಿಪ್ರಾಯಗಳು ನಮ್ಮನ್ನು ಯಾವುದೇ ಒಂದು ನಿಶ್ಚಿತ ನೆಲೆಗೆ ತಂದು ನಿಲ್ಲಿಸುವುದಿಲ್ಲವಾದರೂ ವರ್ಣಾಶ್ರಮ ಪದ್ಧತಿಗೆ ಪೂರ್ವದಲ್ಲಿದ್ದ ಕುಂಬಾರನನ್ನು ಒಂದು ರೀತಿಯಲ್ಲಿ ವರ್ಣಾಶ್ರಮ ಪದ್ಧತಿಯ ಚೌಕಟ್ಟಿನೊಳಗೆ ಸಿಕ್ಕಿಸುವ ಯತ್ನವನ್ನು ನಾವು ಕಾಣಬಹುದಾಗಿದೆ."[೧]

"ಪುರಾಣಗಳು ನಮ್ಮ ಶಿಲಾಪೂರ್ವಯುಗದ ಆದಿಮಾನವರ ಅಲಿಖಿತ ಚರಿತ್ರೆ ಎನ್ನುವುದು ವಿದ್ವಾಂಸರ ಮತ. ತ್ರಿಮ್ಷಿಯನ್ ಇಂಡಿಯನ್ ಪುರಾಣ ಐತಿಹ್ಯಗಳನ್ನು ಅಧ್ಯಯನ ಮಾಡಿದ ಬೋಅಸ್. ಅವುಗಳಲ್ಲಿ ಭೌತಿಕ ಸಂಸ್ಕೃತಿ, ಜನಪದ ವೃಂದಗಳ ಆರ್ಥಿಕ ಸ್ಥಿತಿಗತಿ, ಸಾಮಾಜಿಕ ಸ್ವರೂಪ ನೀತಿ ಮತ್ತು ಭಾವನಾತ್ಮಕ ಪರಿಕಲ್ಪನೆಗಳ

೧. "Tribes and Castes of Bengal" Concerning the traditional parentage of the Caste there seems to be a wide difference of opinion among the recognized authorities on the subject. Edition: Sir H. Rezale.

ವಿವರಗಳನ್ನು ಗಮನಿಸಿ ಪುರಾಣಗಳು 'ಬುಡಕಟ್ಟಿನ ಆತ್ಮಚರಿತ್ರೆ'ಎಂದು ಕರೆದಿದ್ದಾನೆ."[೧] " 'ಪುರಾಣ ಎನ್ನುವುದು ಚರಿತ್ರೆಯಲ್ಲ, ಚರಿತ್ರೆಯ ಮಾತೃಕೆ' ಎನ್ನುವುದು ಎಲಿಯಡ್ ಅಭಿಪ್ರಾಯ. ಸಾಂಸ್ಕೃತಿಕ ಮಾನವಶಾಸ್ತ್ರಜ್ಞ ಮೆಲ್‌ವಿಲ್ ಹೆರ್ಸ್ಕೊವಿಟ್ಸ್ ಪುರಾಣಗಳನ್ನು ವಿಶ್ವಾಸಪತ್ರ ಚಾರ್ಟರ್ ಆಫ್ ಬಿಲೀಫ್' ಎಂದು ಕರೆಯುತ್ತಾನೆ. ಈ ಮಾತುಗಳ ಬೆಳಕಿನಲ್ಲಿ ಹೇಳುವುದಾದರೆ ಕುಲಾಲಕ ಮತ್ತು ತ್ವಷ್ಟೃಗಳು ಅಜ್ಞಾತ ಕಾಲದಿಂದಲೂ ಜನಪದ ವೃಂದಗಳ ವಾಕ್‌ಪರಂಪರೆಯಲ್ಲಿ ಉಳಿದು ಬಂದ ಆದಿಮ ಕುಂಬಾರರು ಎಂದು ತಿಳಿಯಬಹುದು."[೨]

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಈ ಕುಂಬಾರರು ಅವರ ಉದ್ಯಮ, ಉಪಕರಣಗಳಿಗೆ ಸಂಬಂಧಿಸಿದ ಅನೇಕ ಉಲ್ಲೇಖಗಳಿವೆ. ಅವರ ಮೂಲವನ್ನು ಗಮನಿಸಿದಾಗ ಕುಂಭ(ಕುಂಬ) ಎಂದರೆ 'ಗಡಿಗೆ' ಅಥವಾ ಕುಂಬಾರ ಎಂದಾಗಿದೆ. ಇವರನ್ನು 'ಕುಂಬಿಗ' ಎಂದು ಕೋಶ ಕರೆದಿದೆ. ಅಚ್ಚಗನ್ನಡವೇ ಆಗಿದೆ. ಇವನ ಹೆಂಡತಿ ಕುಂಬಾರತಿ (ಕುಂಬಾರಗಿತ್ತಿ) ಇವರ ಕಾರ್ಯಗಾರ ಕುಂಭಗಾರಶಾಲೆ (ಕುಂಬಾರಶಾಲೆ). ಇಲ್ಲಿ ಇವನು ಬಳಸುವ ಮುಖ್ಯವಾದ ಉಪಕರಣಗಳು ಎರಡು ತಿಗುರಿ(ತಿಹರಿ) ತಿಗರಿಯ ಕೋಲು ಇದನ್ನೆ ಕುಂಬಾರನ ಚಕ್ರ. ಕುಲಾಲಚಕ್ರ, ಕೋರವನ ಚಕ್ರ ಎಂದು ಕರೆಯುವುದು. ಕುಂಬಾರನ ತಿಗರಿ ತಿರುಗುವಂತೆ ಕುಂಬಾರಿಕೆಯೂ ಹತ್ತಾರು ದಿಕ್ಕುಗಳಲ್ಲಿ ಪ್ರಸಾರಗೊಂಡಿರುವುದು ಸಹಜಗೊಂಡಿದೆ.

'ಲೋಕದೊಳಗೆ ಕುಂಬರನ ಚಕ್ರಂ ಕೂರ್ತು ಕೋಲಿಂ
ಕುಲಾಲನೇ ತಿರುಗಿಸಲ್ ತಿರುಗುವುದೋ ತನ್ನ ತಾಂ
ತಿರುಗುತಿಹುದೋ' (ವೀರಶೈವ ಪುರಾಣ, ಪು. ೪–೫–೫೦)ರಲ್ಲಿ ಈ

ಕುಂಬಾರ ತಿಗರಿ ತಿರುಗಾಡಿದೆಲ್ಲೆಲ್ಲ ಕುಂಬಾರನ ತಿಗರಿಯೂ ವಿಚಾರ ತಿಳಿದುಬಂದಿದೆ.

ಜಾತಿಯ ನಿರ್ದೇಶನದ ದೃಷ್ಟಿಯಿಂದ ಕುಂಬಾರರು ಶೂದ್ರರೆಂದೇ? ಪರಿಗಣಿತರಾಗಿದ್ದರೂ ಹಲವಾರು ವರ್ಗಸ್ತರಗಳು ಇರುವ ಶೂದ್ರ ಜಾತಿಯಲ್ಲಿ ಮೇಲುವರ್ಗಕ್ಕೆ ಸೇರುತ್ತಾರೆ. ಸಾಮಾಜಿಕ ವ್ಯವಸ್ಥೆಯಲ್ಲಿ ಶೂದ್ರರಿಗಿಂತ ಉನ್ನತ ವರ್ಗದವರು ಈ ಕುಂಬಾರರು ಎಂದು ಹಾಗೂ ಇವರಲ್ಲಿ ಉತ್ತರದವರು ಮತ್ತು ದಕ್ಷಿಣದವರೆಂದು ಪ್ರಭೇದಗಳಿವೆ. ಉತ್ತರದವರು ಮಣ್ಣಿನ ಚಕ್ರವನ್ನು ಬಳಸಿದರೆ ಎರಡನೆಯವರು ಮರದ ಚಕ್ರವನ್ನು ಬಳಸುತ್ತಾರೆ. ಈ ಕುಂಬಾರರು 'ಅಶುದ್ಧ

---

೧. Mellville J.Herskovits : 'Cultural Anthropology', Page. 262.

೨. E.Eliade : Patterns of Comparative Religion, Page. 426. .

ಬ್ರಾಹ್ಮಣ' ವಂಶಕ್ಕೆ ಸೇರಿದವರು ಎಂದು ಹೇಳಿಕೊಳ್ಳುತ್ತಾರೆ. ಅದರ ಒಂದು ಮೂಲ ಕತೆ ಹೀಗಿದೆ.

ಒಬ್ಬ ಬ್ರಾಹ್ಮಣ ವಿದ್ವಾಂಸನು ಆಳವಾದ ಅಧ್ಯಯನವನ್ನು ನಡೆಸಿದ ನಂತರ ತಾನು ನಿರ್ದಿಷ್ಟವಾದ ದಿನದಂದು ಗೊತ್ತಾದ ಗಳಿಗೆಯಲ್ಲಿ ಹೆಣ್ಣನ್ನು ಕೂಡಿದರೆ ಅತ್ಯಂತ ಮೇಧಾವಿ ಮತ್ತು ಶಕ್ತಿಶಾಲಿಯಾದ ಮಗುವನ್ನು ಪಡೆಯಬಹುದೆಂಬುದನು ಕಂಡುಕೊಂಡನು. ಆ ಮಹಾಸುದಿನಕ್ಕಾಗಿ ಬಹಳ ದಿನಗಳನ್ನು ಕಾದ ಬ್ರಾಹ್ಮಣನು ತನ್ನ ಹೆಂಡತಿಯ ಮನೆಗೆ ಹೊರಟನು. ಆ ಸಮಯದಲ್ಲಿ ಎಡಬಿಡದೆ ಮಳೆ ಸುರಿಯ ತೊಡಗಿತು. ಅವನು ತನ್ನ ಮನೆಯನ್ನು ಸೇರಲಾರದೆ ಅಂದು ರಾತ್ರಿ ಮಡಕೆ ಮಾಡುವವನೊಬ್ಬನ ಮನೆಯಲ್ಲಿ ತಂಗುವುದು ಅನಿವಾರ್ಯವಾಯಿತು. ತನ್ನ ಶೋಧನೆ ನಿಷ್ಫಲವಾಗಬಾರದೆಂದು ಭಾವಿಸಿದ ಬ್ರಾಹ್ಮಣನು ತಾನು ತಂಗಿದ್ದ ಮನೆಯವನ ಮಗಳೊಡನೆ ಕೂಡಿ ಗಂಡು ಸಂತಾನವನ್ನು ಪಡೆದನು. ಆತನಿಗೆ 'ಶಾಲಿವಾಹನ' ಎಂದು ನಾಮಕರಣ ಮಾಡಿದರು. ಇವನು ಕುಂಬಾರ ಕಲೆಯಲ್ಲಿ ಅದ್ವಿತೀಯ ಪ್ರತಿಭೆಯನ್ನು ಬಾಲ್ಯದಲ್ಲಿಯೇ ಪಡೆದು ಯೋಧ ಮಣ್ಣಿನ ಬೊಂಬೆಯನ್ನು ತಮಾಷೆಗಾಗಿ ಮಾಡುತ್ತಾ ಬೇಕಾದಷ್ಟು ಗೊಂಬೆಯೋಧರನ್ನು ಒಂದೆಡೆ ಇಟ್ಟಿದನು. ಕಾಲಾನಂತರ ವಿಕ್ರಮಾದಿತ್ಯನು ದಕ್ಷಿಣ ಭಾರತವನ್ನು ಮುತ್ತಿದ ಮೇಲೆ ತನ್ನ ಸೈನ್ಯಕ್ಕೆ ಮಡಕೆಗಳನ್ನು ಒದಗಿಸಲು ಆಜ್ಞೆ ಮಾಡಿದನು. ಆಗ ಶಾಲಿವಾಹನ ತನ್ನ ಮಣ್ಣಿನ ಯೋಧರಿಗೆ ಅದ್ಭುತವಾಗಿ ಜೀವ ತುಂಬಿ ಶತ್ರುವಿನ ಮೇಲೆ ಯುದ್ಧ ಮಾಡಿ ಅವರನ್ನು ಸೋಲಿಸಿದಾಗ ನಂತರ ಕುಂಭಕಲೆಯಲ್ಲಿ ಅತ್ಯಂತ ಪರಿಣತಿಯನ್ನು ಪಡೆದುಕೊಂಡನು. ಮುಂದೆ ಅವನೇ ಮೈಸೂರು ರಾಜ್ಯದ ಮೂಲದವನಾದನು. ತಾವು ಅವನ ವಂಶಸ್ಥರೆಂದು ನಂಬುವ ಮಡಿಕೆಗಾರರಲ್ಲಿರುವ ಕಥೆ ಇದು. ಗ್ರಾಮ ಸಂಸ್ಕೃತಿ ಮಾಲೆ–೧ ಪ್ರೊ. ಎಂ.ಎಲ್.ನರಸಿಂಹಮೂರ್ತಿರವರ ದಕ್ಷಿಣ ಕರ್ನಾಟಕದಲ್ಲಿ ಕುಂಬಾರಿಕೆ ಲೇಖನ).

ಕೆಲವರ ಅಭಿಪ್ರಾಯದಂತೆ ಕುಂಬಾರರ ಮೂಲ ಪುರುಷ ಬ್ರಹ್ಮನ ಮಗ. ಬ್ರಹ್ಮನು ಅವನನ್ನು ಕುಂಬಾರನನ್ನಾಗಿ ಮಾಡಿದನಂತೆ. ಈ ವಿಶ್ವಕರ್ಮವನ್ನು ಕುರಿತ ಒಂದು ಪೌರಾಣಿಕ ಕಥೆಯಲ್ಲಿ ಬರುವ ಕುಂಬಾರ ಉಲ್ಲೇಖವನ್ನು ಹೀಗೆ ನೋಡಬಹುದು. ವಿಶ್ವಕರ್ಮ ಪರಬ್ರಹ್ಮ ಸ್ವರೂಪಿ. ಜಗತ್‌ಶಿಲ್ಪಿ ಆತನಿಗೆ ಮನು, ಮಯ, ಶಿಲ್ಪಿ ವಿಶ್ವಜ್ಞ ಮತ್ತು ತ್ವಷ್ಟ್ರ ಎಂಬ ಐದು ಮಕ್ಕಳು. ಈ ಐವರು ಋಷಿ ಶ್ರೇಷ್ಠರು ತನ್ನ ಐದು ಮಕ್ಕಳಿಗೆ ಅಪೂರ್ವ ಧಾರೆಯೆರೆದ. ಈ ಐದು ಮಕ್ಕಳು ತಂದೆಯ ಕೃಪೆಯಿಂದ ಐದು ವಿವಿಧ ಶಿಲ್ಪ ಕಾಯಕಗಳಲ್ಲಿ ಪರಿಣತರಾದರು. ಮನು ಕಬ್ಬಿಣದ ಕೆಲಸಗಳ ಪ್ರವರ್ತಕ; ಮಯ ಮರಗೆಲಸದಲ್ಲಿ, ಶಿಲ್ಪ ವಿಗ್ರಹ ಕಾಯಕದಲ್ಲಿ

ದೇವಾಲಯ ರಚನೆಯಲ್ಲಿ ಕುಶಲಮತಿ. ತ್ವಷ್ಟ್ರ ಜೀವನಕ್ಕೆ ಅತ್ಯಗತ್ಯವಾದ ಪಾತ್ರೆ ಪಡಗಗಳನ್ನು ಮಾಡುವುದರಲ್ಲಿ ಜಾಣನಾದನು. ಈ ತ್ವಷ್ಟ್ರವೇ ಜಾಣ ಕುಂಬಾರ ಎಂದು (ಜಾನಪದ ಸಾಹಿತ್ಯದರ್ಶನ –೨ ಈ ಲೇಖನದಿಂದ ತಿಳಿದುಬಂದಿದೆ). ಹೀಗೆ ಕುಂಬಾರನು ಬ್ರಹ್ಮನ ವರಪುತ್ರನೆಂದು ಹೇಳುವುದು.

ಮಹಾಭಾರತದಲ್ಲಿ ಒಂದೆರಡು ಕಡೆ ಕುಂಬಾರನ ಉಲ್ಲೇಖ ಬರುತ್ತದೆ. ಏಕಚಕ್ರ ನಗರದಲ್ಲಿ ಭೀಮ ಅಲ್ಲಿಯ ಕುಂಬಾರನೊಬ್ಬ ಮಾಡಿಕೊಟ್ಟ ಅತಿ ದೊಡ್ಡ ಗಾತ್ರದ ಹರವಿಯನ್ನು ಎತ್ತಿಕೊಂಡೇ ಅಲೆದು ಆಹಾರ ಸಂಗ್ರಹಿಸುತ್ತಿದ್ದನಂತೆ, ದ್ರೌಪದಿ ಸ್ವಯಂವರ ಕಾಲದಲ್ಲಿ ಪಾಂಡವರು ಗುಪ್ತವಾಗಿ ವಾಸವಾಗಿದ್ದುದು ಕುಂಬಾರನ ಕೊಟ್ಟಿಗೆಯಲ್ಲೇ (ಪುರಾಣ ಭಾರತ ಕೋಶ : ಯಜ್ಞ ನಾರಾಯಣ ಉಡುಪ, ಪು. ೧೩೬) ಕಾಣಬಹುದಾಗಿದೆ.

ಅರವತ್ತರ ದಶಕದಲ್ಲಿ ಬೆಳಕಿಗೆ ಬಂದ ಜಿನವಲ್ಲಭನ ಕುರಿಕ್ಯಾಲ ಶಾಸನದ (೧೯೬೭) ಬಳಿಕ ಕನ್ನಡ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಸೊಲ್ಲಾಪುರದ ಶಾಸನವೇ ಮುಖ್ಯವಾಗಿದ್ದು ವಿವಾಹ ಪುರಾಣವೆನ್ನುವ ಕಾವ್ಯವೊಂದನ್ನು ಒಳಗೊಂಡಿದೆ. ಈ ಶಾಸನದ ಪ್ರತಿಯು ಹಂಪಿಯ ಆನೆಗೊಂದಿಯ ಹೊಲ ಒಂದರಲ್ಲಿ ಸಿಕ್ಕಿದ್ದು ತಾಮ್ರಶಾಸನ ಮತ್ತು ಶಿಲಾಶಾಸನ ಆರಂಭದ ಭಾಗಗಳು ಒಂದೇ ಆಗಿವೆ. ಅವೆರಡರಲ್ಲೂ ಶಿವ ಗಿರಿಜೆಯ ವಿವಾಹ ಪುರಾಣವೇ ನಿರೂಪಿತವಾಗಿರುವುದು. ಲಿಪಿಯ ಆಧಾರದ ಮೇಲೆ ಶಿಲಾಶಾಸನದ ಕಾಲ ಸು. ೧೨ನೇ ಶತಮಾನವಾದರೆ, ತಾಮ್ರಶಾಸನದ ಕಾಲ ಸುಮಾರು ೧೩ನೇ ಶತಮಾನವಾಗಿದೆ.

ಶಾಸನಗಳ ವರ್ತಕರನ್ನು ಕುರಿತಂತೆ ತಿಳಿಸುತ್ತವೆ: "ನಮ್ಮದೊಂದು ಕುಲ ಹುಟ್ಟಿದ ವಿವಾಹ ಪುರಾಣ ಮನವಧಾರಿಸಿ ಸ್ವಾಮಿಗಳ" ಎಂದು ಶಿಲಾಶಾಸನದಲ್ಲಿ ಕೇಳಿಕೊಂಡಿದ್ದರೆ, ತಾಮ್ರಶಾಸನದಲ್ಲಿ "ನಿಮ್ಮದೊಂದು ಕುಲಂ ಹುಟ್ಟಿದ ವಿವಾಹ ಪುರಾಣಮಂ ಸವಿಸ್ತಾರ ಪೇಳಿ ಸ್ವಾಮಿಗಳಿರ" ಎಂದು ಹೇಳಿದೆ. ತಾಮ್ರಶಾಸನ ಪಾಠವು "ವಿವಾಹ ಪುರಾಣವು ಕುಂಬಾರರ ಕುಲೋತ್ಪತ್ತಿಗೆ ಸಂಬಂಧಿಸಿದ ಕಥೆಯೊಂದನ್ನು ಸೃಷ್ಟಿ ಮಾಡುತ್ತದೆ.

ಕುಂಬಾರನ ಹುಟ್ಟನ್ನು ಕುರಿತ ಐತಿಹ್ಯವೊಂದು ಕುತೂಹಲಕಾರಿಯಾಗಿದೆ. ಕೃತಾಯುಗದಲ್ಲಿ ಮಹೇಶ್ವರ ಅಂದರೆ ಶಿವ, ಹೇಮಂತನ ಮಗಳು ಗಿರಿಜೆಯೊಡನೆ ಮದುವೆಯಾಗಬಯಸಿದ. ಆಗ ಸುರಾಸುರರು ಕೈಲಾಸ ಪರ್ವತದಲ್ಲಿ ಕೂಡಿ ವಿವಾಹ ಸಮಾರಂಭದ ಬಗೆಗೆ ಆಲೋಚನೆ ನಡೆಸಿದರು. ಆಗ ಎದ್ದ ಮುಖ್ಯ ಪ್ರಶ್ನೆಯೆಂದರೆ ಈ ಸಮಾರಂಭಕ್ಕೆ ಅಗತ್ಯವಾದ ಪಾತ್ರೆಪಡಿಗಳನ್ನು ಪೂರೈಸುವವರು ಯಾರು ಎನ್ನುವುದು ಕುಲಾಲ ಎನ್ನುವ ಒಬ್ಬ ಬ್ರಾಹ್ಮಣ ಈ ಪಾತ್ರೆಗಳನ್ನು ತಯಾರಿಸಿಕೊಡಬೇಕು

ಎಂದು ನಿರ್ಣಯಿಸಲಾಯಿತು. ಆಗ ವಿಷ್ಣು ತಿಗರೆಯಂತೆ ಬಳಸಲು ತನ್ನ ಸುದರ್ಶನ ಚಕ್ರ ಕೊಟ್ಟ ಮಂದಾರ ಪರ್ವತ ಈ ಚಕ್ರ–ತಿಗರಗೆ ಆಧಾರವಾಯಿತು. ಹೀಗೆ ಶಿವನ ತ್ರಿಶೂಲವನ್ನು ತಿಗರಿಯನ್ನು ತಿರುಗಿಸುವ ಕೋಲನ್ನಾಗಿಯೂ, ಕಮಂಡಲವನ್ನು ನೀರಿನ ಹೂಜಿಯನ್ನಾಗಿ ಬಳಸಿಕೊಂಡನು. ತಿಗರಿಯಿಂದ ಕುಂಭವನ್ನು ಬೇರ್ಪಡಿಸಲು ಜನಿವಾರವನ್ನು ಬಳಸಿಕೊಂಡನು. ತಯಾರಾದ ಕುಂಭವನ್ನು ನಯಗೊಳಿಸಲು ಆದಿಕೂರ್ಮನನ್ನು ಬಳಸಿಕೊಂಡನು.

"ಜನಪದ ಸಾಹಿತ್ಯದ ಚರಿತ್ರೆಯಲ್ಲಿ ಕನ್ನಡ ಕುಂಬಾರರು ತಮ್ಮ ಮೂಲ ಪುರುಷ ಗುಂಡಬ್ರಹ್ಮ ಅಥವಾ 'ಗುಂಡಯ್ಯ' ಎಂದೂ ತಮ್ಮನ್ನು ಗುಂಡುಭಕ್ತೆಂದೂ ಕರೆದುಕೊಳ್ಳುವರು. ತ್ರಿಮೂರ್ತಿಗಳು ಯಜ್ಞಮಾಡಿದಾಗ, ಅಗ್ನಿಕುಂಡದಿಂದ ಈ ಗುಂಡ ಬ್ರಹ್ಮಮೇಲೆ ಬಂದನೆಂದು ಹೇಳುವರು. 'ಗುಂಡ' ಎನ್ನುವುದು ಕುಂಡದ ತದ್ಭವ ಇರಬಹುದು. 'ಪಾತ್ರೆ'ಗೆ ಕುಂಡ ಎಂದೂ ಹೇಳುವರು. ಬ್ರಹ್ಮನು ಯಜ್ಞ ಮಾಡುವಾಗ ಅಗ್ನಿಯನ್ನು ಕುಂಡದಲ್ಲಿ ಇರಿಸಿಕೊಳ್ಳುತ್ತಿದ್ದರು. ಯಜ್ಞ ಎನ್ನುವುದಕ್ಕೆ ಬ್ರಹ್ಮ ಎಂದು ಹೇಳುವರು. ಯಜ್ಞಕ್ಕಾಗಿ ಬಳಸುತ್ತಿದ್ದ ಅಗ್ನಿಕಾರ್ಯದ ಬೆಂಕಿಯ ಕುಂಡಕ್ಕೆ ಕ್ರಮೇಣ ಕುಂಡ ಬ್ರಹ್ಮ ಎಂದಾಗಿರಬೇಕು. ಹೀಗೆ ಕೋಲಾರ ಜಿಲ್ಲೆಯ ಗೌರಿಬಿದನೂರಿನ ಮಿಣಕನ ಗುರ್ಕಿಯಲ್ಲಿ ಕುಂಬಾರರು ಪೂಜಿಸುವ ಕುಂಡಪ್ಪನ ಗುಡಿಯಿದೆ. ತೆಲುಗಿನ ಪ್ರಭಾವದಿಂದಾಗಿ ಅದು ಕೊಂಡಪ್ಪ ಎಂದಾಗಿರಬಹುದು. ಈತ ಕುಂಬಾರ ಜಾತಿಯ ಅವಧೂತ ಸಂತ" (ಕನ್ನಡ ಜಾನಪದ ವಿಶ್ವಕೋಶ – ಪು. ೪೨೬, ಸಂ. ಡಾ. ಚಂದ್ರಶೇಖರ ಕಂಬಾರ).

ಕುಂಬಾರರ ಮೂಲವನ್ನು ಗುರುತಿಸಿದಾಗ ಮಂಗಳ ಕುಂಭ ತಯಾರಾಯಿತು. ಅಂದಿನಿಂದ ಕುಲಾಲಕನನ್ನು ಕುಂಬಾರರ ಮೂಲಪುರುಷನೆಂದೂ ಅವನು ಬಳಸಿದ ವಸ್ತುಗಳನ್ನು ಕುಂಬಾರಿಕೆಗೆ ಬೇಕಾದ ಮೂಲ ಉಪಕರಣಗಳೆಂದು ಭಾವಿಸಲಾಯಿತು. ಮುಂದೆ ಕುಲಾಲಕನ ವಂಶಸ್ಥರನ್ನು 'ಕುಲಾಲ' ಅಥವಾ ಕುಂಭಕಾರರೆಂದು ಕರೆಯುವುದು ರೂಢಿಗೆ ಬಂದಿತು ಮತ್ತು ಇವರನ್ನು 'ಕುಂಭಕಲೆ' ಮತ್ತು 'ಕುಂಬಾರಿಕೆ' ಎಂದು ಪ್ರಾರಂಭಿಸಲಾಯಿತು. ಕುಂಬಾರರನ್ನು ವಿಶ್ವಕರ್ಮನ ಪೀಳಿಗೆಯೆಂದು ಭಾವಿಸಲಾಗಿದೆ (ಜನಪದ ಮಾರ್ಚ್ ೧೯೯೯, ಪು. ೩೫, ಬಿ.ಎಂ.ಚಂದ್ರಶೇಖರಯ್ಯ).

ಮೈಸೂರು ಪ್ರದೇಶದ ಕುಂಬಾರರು ಮಡಕೆ ಮತ್ತು ಹೆಂಚುಗಳನ್ನು ಮಾಡುತ್ತಾರೆ. ಇದರಲ್ಲಿ ಕನ್ನಡ ಮತ್ತು ತೆಲಗರು ಎಂಬ ಎರಡು ವಿಧಗಳಿವೆ. ಕನ್ನಡದವರು ತಾವು ತೆಲಗು ಕುಂಬಾರರಿಗಿಂತ ಉತ್ತಮರೆಂದು, ತೆಲಗಿನ ಕುಂಬಾರರು ತಮ್ಮ ವಂಶದ ಮೂಲ ಶಾಲಿವಾಹನನೆಂದು ಹೇಳಿ ಜನಿವಾರವನ್ನು ಹಾಕಿಕೊಳ್ಳುತ್ತಾರೆ.

ಇವರು ಮಾಂಸವನ್ನು ತಿನ್ನುವುದಿಲ್ಲ. ಕುಂಬಾರರಲ್ಲಿ ಶೈವ ಮತ್ತು ವೈಷ್ಣವ ಎಂದು ಇಬ್ಬರು ಇದ್ದಾರೆ.

ಕನ್ನಡ ಕುಂಬಾರರಲ್ಲಿ ಪೂಜಾರಿ, ಬಂಪಿ, ಮೂಲ್ಯ ಮುಂತಾದ ಒಳಪಂಗಡ ಹಾಗೂ ಕಸ್ತೂರಿ ಶೂಡುವಂತಿಗೆ, ನಾಗ, ಕೆಂದಾವರೆ ಮೊದಲಾದ ಕುಲಗಳಿವೆ. ತಮಿಳಿನಲ್ಲಿ ಉತ್ತರದ ಮತ್ತು ದಕ್ಷಿಣದ ಕುಸುವರು ಎಂದು ಬೇಧಗಳಿವೆ. ಉತ್ತರದ ಕುಸುವರು ಮಣ್ಣಿನಿಂದ ಮಾಡಿದ ತಿಗರಿಯನ್ನು ದಕ್ಷಿಣದವರು ಮರದಿಂದ ಮಾಡಿದ ತಿಗರಿಯನ್ನು ಬಳಸುವರು.

ಕನ್ನಡ ಜನಪದ ಸಂಸ್ಕೃತಿಯಲ್ಲಿ ಈ ಜನಾಂಗದ ಮೂಲವನ್ನು ಕಂಡಾಗ ನಮ್ಮ ಭಾರತೀಯ ಪಂಚಾಂಗಗಳಲ್ಲಿ ಅದರಲ್ಲಿಯೂ ಹಿಂದೂ ಪಂಚಾಂಗಗಳಲ್ಲಿ ಕಾಲಗಣನೆಯ ಇಸವಿಗಳನ್ನು ಬಳಸುವಾಗ "ಶ್ರೀ ಶಾಲಿವಾಹನ ಶಕವರುಷ" ಎಂದು ಸಾಂಕೇತಿಕವಾಗಿ ಬಳಸುತ್ತೇವೆ. ಈ ಶಾಲಿವಾಹನದ ಶಕದ ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸಿದಾಗ,[೧] ಈ ಶಕೆಯನ್ನು ಸಂಕೇತವಾಗಿ ಉಪಯೋಗಿಸುವ ಮೊದಲು ಇತರೆ ಶಕೆಗಳು ಇದ್ದಿರಲು ಸಾಧ್ಯವಿದೆ. ಈ ಶಾಲಿವಾಹನ ಶಕ ವರುಷಕ್ಕೆ ಕಾರಣರಾದ ರಾಜವಂಶೀಯರೆಂದರೆ ಶಾತವಾಹನರು. ಇವರನ್ನು ಮತ್ಸ್ಯ, ವಿಷ್ಣು, ವಾಯು, ಭಾಗವತ, ಬ್ರಹ್ಮಾಂಡ ಇತ್ಯಾದಿ ಪುರಾಣಗಳಲ್ಲಿ ಕಾಣಬಹುದು. ಈ ಶಾಲಿವಾಹನ ಕುಲದವರನ್ನು ಶಾಲಿವಾಹನ, ಸಡಕಣ, ಸಾತಕರ್ಣಿ, ಶಾತಕರ್ಣಿ ಇತ್ಯಾದಿ ಹೆಸರುಗಳಿಂದ ಕರೆದಿದ್ದಾರೆ. ಹಾಗೆ ಸಂಸ್ಕೃತ ಗ್ರಂಥಗಳಾದ 'ಬೃಹತ್ ಕಥಾಮಂಜರಿ' ಮತ್ತು ಕಥಾಸರಿತ್ಸಾಗರದಲ್ಲಿ 'ಸಾತ' ಎಂಬ ಸಿಂಹವನ್ನು ವಾಹನವನ್ನಾಗಿ ಉಳ್ಳವನು ಶಾತವಾಹನವೆಂದು ಕರೆಯಲ್ಪಟ್ಟಿದ್ದಾರೆ. ಈ ಕುಲದ ಮೂಲ ಪುರುಷನನ್ನು ಪುರಾಣಗಳಲ್ಲಿ ಶಿಶುಕ, ಸಿಂಧುಕ, ಸಿಪ್ರಕ ವೃಷಲ, ಶೂದ್ರಕ ಎಂದು ಅನೇಕ ಹೆಸರುಗಳಿಂದ ಕರೆದು 'ಶಿಶುಕ' ಎನ್ನುವ ಹೆಸರೇ ಈ ಕುಂಬಾರರ ಮೂಲವಾಗಿ ಉಳಿದಿದೆ ಎಂದು ಅಧ್ಯಯನದಲ್ಲಿ ತಿಳಿದುಬಂದಿದೆ.

ಶಾತವಾಹನ ರಾಜಧಾನಿ ಗೋದಾವರಿ ನದಿಯ ಉತ್ತರದ ತೀರದಲ್ಲಿರುವ ಔರಂಗಬಾದ್ ಜಿಲ್ಲೆಯ ಪ್ರತಿಷ್ಠಾನವಾಗಿತ್ತು (ಈಗ ಪೈಠಾಣವೆಂದಾಗಿದೆ). ಇವರ ರಾಜ್ಯ ಪೂರ್ವ ಗೋದಾವರಿ–ಕೃಷ್ಣ ನದಿಯ ಮುಖಜಭೂಮಿಯಿಂದ ಹಿಡಿದು ಪಶ್ಚಿಮ ಕಡಲವರೆಗೂ, ಉತ್ತರದಲ್ಲಿ ನಾಸಿಕದಿಂದ ಹಿಡಿದು ದಕ್ಷಿಣದಲ್ಲಿ ಚಿತ್ರದುರ್ಗ ಜಿಲ್ಲೆಯ

೧. ಕುಂಭನುಡಿ ರಾಷ್ಟ್ರೀಯ ತ್ರೈಮಾಸಿಕ ಪತ್ರಿಕೆ, ಸಂ. ಪಿ.ವೀರಶೆಟ್ಟಿ, ೧೯೯೯ರ ತಿಂಗಳ ಸಂಚಿಕೆ, ಪು. ೭೦ರಲ್ಲಿ.

ಚಂದ್ರವಳ್ಳಿಯವರೆವಿಗೂ ವಿಸ್ತಾರವಾಗಿ ಹರಡಿತ್ತು. ಮಗಧ ರಾಜಧಾನಿ ಪಾಟಲಿಪುತ್ರ ಹಾಗೂ ಮಾಳವ ಭೂಪ್ರದೇಶವನ್ನು ಕೆಲವು ಕಾಲ ವಶಪಡಿಸಿಕೊಂಡಿದ್ದರು. ಕರ್ನಾಡ, ಶ್ರೀಕಾಕುಳ, ನಾಗರ್ಜುನಕೊಂಡ, ಕಟಕ, ಹಿರೇಹಡಗಲಿ, ನಾಸಿಕ, ತಾಳಗುಂದ, ಬನವಾಸಿ, ನಿಟುವಳ್ಳಿ ಇತ್ಯಾದಿ ಇವರ ಸಾಮ್ರಾಜ್ಯದ ಪ್ರಮುಖ ಸ್ಥಳಗಳಾಗಿದ್ದವು.

ಮೊದಲು ಭರತ ಖಂಡವನ್ನು ಆಳುತ್ತಿದ್ದ ಕಣ್ವಗೋತ್ರದ ಬ್ರಾಹ್ಮಣ ಭೂಪಾಲನಾದ ಕಣ್ವ ಸುಶರ್ಮನನ್ನು ಸೋಲಿಸಿ ಶಾತವಾಹನರ ಮೂಲ ಪುರುಷನಾದ ಶಿಶುಕನು ರಾಜನೆಂದು ಹೇಳಲಾಗಿದೆ. ಈ ಕಣ್ವರಿಗಿಂತ ಮೊದಲು ಮೌರ್ಯರು ಆಳಿದರೆಂದೂ ಕ್ರಿ.ಪೂ.೧೮೦ಕ್ಕೆ ಇವರ ಆಳ್ವಿಕೆ ಪತನಾನಂತರ ಶುಂಗರು ಸು: ೧೧೨ ವರುಷ ಆಳಿದರೆಂದು ನಂತರ ಕಣ್ವರು ೪೫ ವರ್ಷ ಆಳಿದರೆಂದೂ ತಿಳಿದುಬರುತ್ತದೆ. ಆ ಕಣ್ವರನಂತರ ಶಿಶುಕನು ಸುಮಾರು ೨೩ ವರ್ಷ ಸಾಮ್ರಾಟನಾಗಿ ಆಳಿದನೆಂದೂ, ಶಿಶುಕ ಶಾತವಾಹನರ ಮೊದಲ ಸಾಮ್ರಾಟನಾದರೆ ಪ್ರಲೋಮನೆಂಬ ರಾಜನೇ ಕೊನೆಯವನೆಂದೂ ಒಟ್ಟು ಹತ್ತೊಂಬತ್ತಕ್ಕೂ ಹೆಚ್ಚು ಜನರು ಶಾತವಾಹನ ರಾಜರು ಸುಮಾರು ೩೧೧ ವರುಷ ಕಾಲ ಆಳ್ವಿಕೆ ನಡೆಸಿದ್ದಾರೆ. ಇತಿಹಾಸದ ವಿದ್ವಾಂಸರ ಪ್ರಕಾರ ಭಿನ್ನಾಭಿಪ್ರಾಯವಿದ್ದರೂ ಕ್ರಿ.ಶ. ಮೂರು ಶತಮಾನಗಳು ಭರತ ಖಂಡದಲ್ಲಿ ಶಾತವಾಹನ ಸಾಮ್ರಾಟರು ಆಳ್ವಿಕೆ ನಡೆಸಿದ್ದಾರೆಂದು ಊಹೆ ಮಾಡಲಾಗಿದೆ. ಇವರ ಕಾಲಗಣನೆಯನ್ನು ಸ್ವಲ್ಪ ಹತ್ತಿರವಾಗಿಸಿಕೊಳ್ಳಲು ಶಾತವಾಹನರ ಅನೇಕ ಕಿರಿಯ ಮನೆತನದ ರಾಜರ ಕಾಲದ ಶಾಸನವನ್ನು ಗಮನಿಸಬಹುದು. ಸಾಮ್ರಾಜ್ಯ ಪತನವಾದಾಗ ದಕ್ಷಿಣದಲ್ಲಿ ಇವರ ಆಶ್ರಿತರಿಗೆ ಶಾತವಾಹನ ಸಾಮ್ರಾಜ್ಯ ಹಂಚಿಹೋಯಿತು.

ಚುಟುಕುಲದ ಶಾತಕರ್ಣಿ ಅರಸರು ಬನವಾಸಿಯಿಂದ ಆಳತೊಡಗಿದರು. ಭೀಮಾ ವೇದಾವತಿ ನದಿ ಪ್ರದೇಶ, ಶಿವಮೊಗ್ಗ, ಕಾರವಾರ, ಧಾರವಾಡ, ಬೆಳಗಾಂ, ಬಿಜಾಪುರ, ಚಿತ್ರದುರ್ಗಾ ಅಥವಾ ಕರ್ನಾಟಕ ಭೂಪ್ರದೇಶದಲ್ಲಿ ಕುಂತಳನಾಡೆಂದು ಹೇಳಲಾಗಿದೆ. ಬನವಾಸಿಯಿಂದ ಆಳುತ್ತಿದ್ದ ಶಾತಕರ್ಣಿಯವರು ಅಷ್ಟು ಪ್ರಬಲರಾಗಿರಲಿಲ್ಲ. ಆದರೂ ಇವರು ಕುಂತಳೇಶ್ವರರಾಗಿ ಆಳಿದರು. ಕ್ರಿ.ಶ.೩ನೇ ಶತಮಾನದ ೪ನೇ ಪಾದದಲ್ಲಿ ಬನವಾಸಿಯಿಂದ ಆಳುತ್ತಿದ್ದ ಚುಟುಕುಲಾನಂದ ಶಾತಕರ್ಣಿರಾಜನ ಬಂಧು ಬನವಾಸಿಯ ಶಾಸನದಲ್ಲಿ ವಸವೀ ಸತ್ಯ ಸಂವಚ್ಛರ ಎಂದು ಕಾವ್ಯವನ್ನು ಉಲ್ಲೇಖಿಸಿದೆ. ಅರ್ಥಾತ್‌ವಷಾದ್ವಿಶತ ಅಂದರೆ ೧೦೨ನೇ ಸಂವತ್ಸರ ಎಂದು ಹೇಳಿದೆ. ಈ ರಾಜನು ಶಾತಕರ್ಣಿಯ ಕಿರಿಯ ಮನೆತನದವನಾಗಿದ್ದು ಶಾಲಿವಾಹನ ಶಕೆಯ ಪ್ರಾರಂಭದಿಂದ ಎಂದರೆ ಕ್ರಿ.ಶ.೭೮ನೇ ವರ್ಷದಿಂದ ೧೦೨ನೇ

ವರ್ಷವೆಂದು ಎಣಿಸಬಹುದು. ಈ ಬನವಾಸಿಯ ಶಾಸನಕಾಲ ೭೮ + ೧೦೨೨. ೧೮೮೦ನೇ ಸಂವತ್ಸರವೆಂದು ನಿರ್ಧಾರವಾಗಿ ಹೇಳಬಹುದಾಗಿದೆ ಎಂದು "ಶ್ರೀನಿವಾಸ ಜೋಯಿಸರು" ಆಧಾರಸಹಿತ ತಮ್ಮ ಲೇಖನದಲ್ಲಿ ಉಲ್ಲೇಖಿಸಿದ್ದಾರೆ.

ಕರ್ನಾಟಕದ ಪ್ರಥಮ ಚಕ್ರವರ್ತಿಯಾದ ಶಾತವಾಹನ ಮತ್ತು ಆಗಿನ ಕಾಲದಲ್ಲೇ ರಾಸಾಯನ ಔಷಧಿಗಳ ಸಿದ್ಧರಸ ತಜ್ಞನೆಂದು ಪ್ರಖ್ಯಾತರಾಗಿದ್ದ ನಾಗಾರ್ಜುನನು ಅತ್ಯಂತ ನಿಕಟವರ್ತಿಯಾಗಿದ್ದರೆಂದು ಶಾತವಾಹನನ್ನು ರಾಜಪದವಿಗೇರಿಸಿ ಅವನ ಬಳಿ ಮಂತ್ರಿಯಾಗಿದ್ದಂತೆ ತೋರುತ್ತದೆ. ಕೃಷ್ಣಾನದಿಯ ಬಲದಂಡೆಯ ಮೇಲೆ ಆಂಧ್ರದ ಗುಂಟೂರುಜಿಲ್ಲೆಯ ಪಾಲನಬಾಡು ತಾಲ್ಲೂಕಿನ ಒಂದು ಬೆಟ್ಟಕ್ಕೆ ನಾಗಾರ್ಜುನಕೊಂಡ ಎಂದೇ ಹೆಸರಾಗಿದೆ ಹಾಗೂ ಬೌದ್ಧಪುಣ್ಯ ಸ್ಥಳವಾಗಿದೆ. ಈ ನಾಗರ್ಜುನನು ಆಂಧ್ರಕ್ಕಷ್ಟೇ ಅಲ್ಲ. ಇಡೀ ಭಾರತ, ಚೀನಾ, ಟಿಬೆಟ್, ಕೊರಿಯಾ ಮುಂತಾದ ರಾಷ್ಟ್ರಗಳಲ್ಲಿ ಸಹ ಇಂದಿಗೂ ಅವನ ಹೆಸರಿನ ವಿದ್ಯಾ ಪ್ರಮುಖವಾಗಿವೆ.

ಮುಸ್ಲಿಂ ಮತದಲ್ಲಿ ಮಹಮ್ಮದ್ ಪೈಗಂಬರರು ಮೆಕ್ಕಾದಿಂದ ಮದೀನಕ್ಕೆ ಹೋದ ನೆನಪಿಗಾಗಿ ಹಿಜರಸನ್ ಎಂದು ಪಂಚಾಂಗದಲ್ಲಿ ಬಳಸುತ್ತಾರೆ. ಭಾರತ ಸರ್ಕಾರವು ೧೯೫೨ರಲ್ಲಿ ಮೇಘನಾಥಶಹಾ ಅವರ ಮುಖಂಡತ್ವದಲ್ಲಿ ತನ್ನದೇ ಆದ ರಾಷ್ಟ್ರೀಯ ಪಂಚಾಂಗ ಪ್ರಾರಂಭಿಸಿತು. ಇದಕ್ಕೆ ಶಾಲಿವಾಹನ ಶಕೆಯನ್ನು ಆಧಾರವನ್ನಾಗಿ ಉಪಯೋಗಿಸಲಾಗಿದೆ. ೧೯೫೫ರಲ್ಲಿ ಇದನ್ನು ಪಾಸುಮಾಡಿ ಭಾರತೀಯ ರಾಷ್ಟ್ರೀಯ ಪಂಚಾಂಗ ಪ್ರಾರಂಭಿಸಿತು. ಶಾಲಿವಾಹನ ಶಕೆ ಬಳಸುವ ಪಂಚಾಂಗಗಳಲ್ಲಿ ಮತ್ತು ಮುಸ್ಲಿಮರ ಪಂಚಾಂಗಗಳಲ್ಲಿ ಚಾಂದ್ರಮಾನ ಪದ್ಧತಿಯಲ್ಲಿ ಬಳಸಲಾಗುತ್ತದೆ. ಆದರೆ ಈಗ ಸೌರಮಾನ ಪದ್ಧತಿಯನ್ನು ಜಾರಿಗೆ ತರಲಾಗಿದೆ. ಕಾರಣ ಸೌರಮಾನ ಪದ್ಧತಿಯಲ್ಲಿ ಲೆಕ್ಕಾಚಾರ ತಪ್ಪುವುದಿಲ್ಲವಂತೆ. ಒಟ್ಟಿನಲ್ಲಿ ಕುಂಬಾರರು ಶಾಲಿವಾಹನ ಶಕ ವರುಷ ಕಾಲಗಣನೆ ನಿರ್ದಿಷ್ಟ ಗೊತ್ತಿರದಿದ್ದರೂ ಇದನ್ನು ಶಕವರುಷವನ್ನಾಗಿ ಕುಂಬಾರ ಜನಾಂಗದವರು ಶಾಲಿವಾಹನ ಎಂದು ಬಳಸುತ್ತಾರೆ.

**ಕುಂಬಾರಿಕೆಯ ಪ್ರಾಚೀನತೆ:**

ಮಾನವನ ಜೀವನದ ಅತ್ಯಂತ ಪ್ರಾಚೀನ ಸಾಧನಗಳಲ್ಲಿ ಕುಂಬಾರಿಕೆಯು ಒಂದು ಅಗತ್ಯವಾದ ವೃತ್ತಿ ಸಾಧಿತ ಕಲೆಯಾಗಿದೆ. ಪ್ರಪಂಚದ ಅನೇಕ ಪ್ರಾಚೀನ ನಾಗರಿಕತೆಗಳಿಗೆ ತಮ್ಮದೇ ಆದ ವಿಶಿಷ್ಟ ಬಗೆಯ ಗಡಿಗೆ, ಬಿಂದಿಗೆ, ಮಡಿಕೆಗಳನ್ನು ತಯಾರಿಸುವ ವೃತ್ತಿ ಕೌಶಲ ಸಿದ್ಧಿಸಿತ್ತು. ಪುರಾತತ್ವ ಸಂಶೋಧಕರು ಈ ಕುಂಭಗಳ

ಮಾದರಿ ಆಧಾರ ವಿನ್ಯಾಸಗಳನ್ನು ಆಯಾ ಜನಾಂಗದ ಬದುಕಿನ ವಿವಿಧ ಹಂತಗಳ ವಿಕಾಸದ ಪಳೆಯುಳಿಕೆಗಳೆಂದು ಸ್ವೀಕರಿಸಿ ಅವುಗಳನ್ನು ಆಧರಿಸಿ ಅವು ಯಾವ ಯಾವ ಪ್ರದೇಶದ ನೆಲೆ ವಸತಿಗಳಿಗೆ ಸೇರಿದವು ಎನ್ನುವುದರ ಪತ್ತೆ ಹಚ್ಚುತ್ತಾರೆ.

ಕುಂಬಾರರ ಪ್ರಾಚೀನತೆಯನ್ನು ಗಮನಿಸಿದಾಗ ಮೊದಲು ಬೇಟೆಗಾರಿಕೆ, ಗೆಡ್ಡೆಗೆಣಸುಗಳ ಸಂಗ್ರಹಗಳ ನಿರಂತರ ಅಲೆಮಾರಿತನ ಕಡಿಮೆಯಾಗಿ ಗೋಧಿ ಮತ್ತು ಬಾರ್ಲಿಗಳನ್ನು ಆದಿಮಾನವ ಬೆಳೆದ ಕಾಲ ಕ್ರಿ.ಪೂ. ಸುಮಾರು ೧೦,೦೦೦ ಮತ್ತು ೮೦೦೦ ಎಂಬುದು ಜೊಸೆಫ್ ವೂಲ್ಫ್ ಅವರ ಅಭಿಪ್ರಾಯವಾಗಿದೆ"[೧]. ಈ ಕಾಲದ ಆದಿಮ ಗುಂಪುಗಳನ್ನೇ ಪ್ರಪಂಚದ ಪ್ರಥಮ ಕೃಷಿಕರೆಂದು ಗುರುತಿಸಲಾಗಿದೆ. ಕೃಷಿ ಸಾಧನೆ ಸಲಕರಣೆಗಳನ್ನು ಹುಟ್ಟಿಸಿಕೊಂಡು ತಮಗೆ ಅನುಕೂಲವಾದ ಭೂಪ್ರದೇಶದ ಭಾಗಗಳಲ್ಲಿ ನೆಲೆನಿಂತ ಕಾಲದಿಂದ ಗುಡಿಸಲು ಹಟ್ಟಿ, ಕೆರೆಕಟ್ಟೆಗಳು ರೂಪುಗೊಂಡವು. ಇದರ ಜೊತೆಗೆ ಆದಿಮ ಗುಂಪುಗಳ ಬದುಕಿನಲ್ಲಿ ಪಾತ್ರೆ ಪಡಗ, ಮಡಿಕೆಕುಡಿಕೆಗಳು ತಲೆದೋರಿದುವು ಎಂದು ಅಧ್ಯಯನದಲ್ಲಿ ತಿಳಿದುಬರುತ್ತದೆ.

ಶಿಲಾಪೂರ್ವಯುಗ, ಶಿಲಾಯುಗ, ನವಶಿಲಾಯುಗಗಳ ನಿಕ್ಷೇಪ ಪಳೆಯುಳಿಕೆಗಳನ್ನು ಪರಿವೀಕ್ಷಿಸಿದ ಪ್ರಾಚ್ಯವಸ್ತು ಸಂಶೋಧಕರು ಮಣ್ಣಿನ ಸುಟ್ಟ ಮಡಿಕೆ ತಯಾರಿಸುವ ವಿಧಾನ ಸುಮಾರು ಕ್ರಿ.ಪೂ. ೨೦೦೦ ಅಷ್ಟು ಕಾಲಕ್ಕೆ ರೂಪುಗೊಂಡಿತ್ತೆಂದು ಹೇಳುತ್ತಾರೆ.[೨] ಇವರ ಪ್ರಕಾರ ದಕ್ಷಿಣ ಜಾಗ್ರೋಸ್ ಬೆಟ್ಟಗಳ ಪ್ರದೇಶದಲ್ಲಿ ಇಂಥ ಸುಟ್ಟ ಮಡಕೆಗಳ ಖಚಿತ ಕುರುಹನ್ನು ಕಂಡುಹಿಡಿಯಲಾಗಿದೆ.

ಕ್ರಿ.ಪೂ. ೨೦೨ರಿಂದ ಕ್ರಿ.ಶ.೨೨೦ರ ವರೆಗಿನ ಚೀನಾದೇಶದ 'ಹಾನ್' ಅರಸು ಮನೆತನದ ಅರಸರ ಗೋರಿಗಳಲ್ಲಿ ಪಿಂಗಾಣಿ ಪಾತ್ರೆಗಳು ದೊರಕಿರುವುದನ್ನು ಸಂಶೋಧಕರು ಗುರ್ತಿಸಿದ್ದಾರೆ (ಜಾನಪದ ಸಾಹಿತ್ಯದರ್ಶನ –೨, ಜ್ಞಾನಗಂಗೋತ್ರಿ, ಪು. ೧೭೭–೧೭೮ ಸಂ. ದೇವೇಂದ್ರಕುಮಾರ ಎಸ್.ಹಕಾರಿ). ಚೀನಾ ಪಿಂಗಾಣಿ ಪಾತ್ರೆಗಳಿಗೆ ಇಂದಿಗೂ ಪ್ರಸಿದ್ಧ ಪಡೆದ ರಾಷ್ಟ್ರ. ಆ ರಾಷ್ಟ್ರದಲ್ಲಿ ಕುಂಬಾರಿಕೆ ಒಂದು ಸಮೃದ್ಧ ಉದ್ದಿಮೆಯಾಗಿ ಬೆಳೆಯುತ್ತಿರುವುದನ್ನು ಕಾಣಬಹುದಾಗಿದೆ. ಮಣ್ಣನ್ನು ಆಧರಿಸಿದ ವಿವಿಧ ಬಗೆಯ ಮಿಶ್ರಣದಿಂದ ಪಿಂಗಾಣಿಪಾತ್ರೆ, ಇಟ್ಟಿಗೆ, ಗಾಜು, ಮಡಕೆ, ಲೋಟ, ಹೆಂಚು, ಎನಾಮಿಲ್ ಸಾಮಾನು ಮುಂತಾದ ಉತ್ಪನ್ನಗಳು ಕುಂಭೋದ್ಯಮದ ವಿಭಿನ್ನ ದಿಸೆಯಲ್ಲಿ ನಿರಂತರ ಬೆಳವಣಿಗೆಯನ್ನು ಸೂಚಿಸುತ್ತದೆ.

---

೧. 'The Dawn of Man', ಜೊಸೆಫ್ ವೂಲ್ಫ್, ಪುಟ. ೧೯೫.

೨. ಅದೇ, ಪುಟ. ೨೦೧.

ಪಾಶ್ಚಾತ್ಯ ದೇಶಗಳಿಗೆ ಸು. ೧೬-೧೭ನೇ ಶತಮಾನದಲ್ಲಿ ಚೀನಾ ದೇಶದಿಂದ ಪಿಂಗಾಣಿ ಪದಾರ್ಥಗಳು ಆಮದುಗೊಂಡು ಜನಪ್ರಿಯವಾದವು. ಪಿಂಗಾಣಿ ವಸ್ತುಗಳನ್ನು ಮೊಟ್ಟಮೊದಲು ಐರೋಪ್ಯ ರಾಷ್ಟ್ರಗಳಲ್ಲಿ ತಯಾರಿಸಿದ ಶ್ರೇಯಸ್ಸು ಜರ್ಮನಿಯ 'ಯೊಹಾನೆಸ್ ಬಾಟಗರ್ ಎನ್ನುವವನಿಗೆ ಸಲ್ಲುತ್ತದೆ. ಈತ ೧೮ನೇ ಶತಮಾನದಲ್ಲಿ ಜೇಡಿಮಣ್ಣಿಗೆ ಎಲುಬಿನ ಭಸ್ಮವನ್ನು ಬೆರಸಿ ಪಾತ್ರೆಗಳನ್ನು ಸಿದ್ಧಮಾಡಿದ. ಇದಕ್ಕೆ 'ಚಿಕ್ಕ ಎಲುಬು ಪಿಂಗಾಣಿ' ಎಂದು ಕರೆಯಲಾಗಿದೆ.

ಕುಂಬಾರಿಕೆ ವಿಶೇಷತಃ ಪ್ರಾಚೀನತೆಯನ್ನು ಹೆಚ್.ಆರ್.ಸಂಕಾಲಿಯರವರು ಇಂಡೆಸ್ (ಸಿಂಧೂಕೊಳ್ಳಗಳ) ನಾಗರಿಕತೆಯ ಅಧ್ಯಯನ ನಡೆಸಿದ ವಿದ್ವಾಂಸರು ಕುಂಬಾರಿಕೆ ಇರಾನ್ ಮುಂತಾದ ಪ್ರದೇಶಗಳಿಂದ ಭಾರತದ ವಿವಿಧ ಪ್ರದೇಶಗಳಿಗೆ ಹರಡಿತೆಂದು ಹೇಳಿದ್ದಾರೆ. ಕುಂಬಾರಿಕೆಯು ಒಂದು ವರ್ಣಮಯ ಕುಶಲಕಲೆಯಾಗಿ ರೂಪುಗೊಂಡ ಸಂದರ್ಭವನ್ನು ಹೇಳುವಾಗ ಮಾತ್ರ ಕಲಾಕೃತಿ ನೈಪುಣ್ಯ ಇರಾನ್ ಆಫ್ಘಾನಿಸ್ತಾನ್, ಬಲೂಚಿಸ್ಥಾನ ಮೊದಲಾದ ದೇಶಗಳ ನಯಗಾರಿಕೆಯಿಂದ ಪ್ರಭಾವಿತವಾಯಿತು. ಇದು ಕುಂಬಾರರ ಮತ್ತು ಕುಂಬಾರಿಕೆಯ ಪ್ರಸರಣದ ಗುಣವನ್ನು ತೋರಿಸುತ್ತದೆ.

ಇರಾನಿನಲ್ಲಿ 'ಸೂಸಾನಗರ' ಇತಿಹಾಸ ಪ್ರಸಿದ್ಧವಾದದ್ದು. ಹಳೆಯ ಒಡಂಬಡಿಕೆಗಳಲ್ಲಿಯೇ ಇದರ ಪ್ರಸ್ತಾಪವಿದೆ. ಇಲ್ಲಿನ ಮಣ್ಣಿನ ಮಡಿಕೆಯ ಮೇಲೆ ಎರಡು ಜೊತೆ ಕತ್ತೆಗಳು ಎದುರು ಬದುರಾಗಿ ನಿಂತಿರುವಂತೆ ನಡುವೆ ನಾಯಿಯೊಂದು ಇರುವಂತೆ ಚಿತ್ರಣವಿದೆ. ಯಾಫ್ರೇಲಿಸ್ ಕಣಿವೆಯಲ್ಲಿ ದೊರೆತ ಮತ್ತೊಂದು ಬಟ್ಟಲಿನ ಮೇಲೆ ಚೇಳುಗಳನ್ನು ಬಿಡಿಸಿದ್ದಾರೆ. ಈ ಚಿತ್ರಗಳು ವಾಸ್ತವಿಕತೆಯಾಗಿ ಕಾಣುವಂತೆ ಮಡಕೆಯ ಮೇಲೆ ತಮ್ಮ ಕಲೆಯ ಕೌಶಲ್ಯವನ್ನು ತೋರಿಸಿದ್ದಾರೆ. ಇತರ ಕಡೆಗಳಲ್ಲಿ ಬೆತ್ತಲೆ ಹೆಂಗಳೆಯರು ನೃತ್ಯಮಾಡುತ್ತಿರುವ ಚಿತ್ರವುಳ್ಳ ಬಟ್ಟಲು ಕೇಶಪಾಶಗಳಿಂದ ಬಿಡಿಸಿದ ನದೀ ವಿನ್ಯಾಸವಿರುವ ಮಡಿಕೆಗಳು ಸಿಕ್ಕಿವೆ.

ಸುಟ್ಟ ಜೇಡಿಮಣ್ಣಿಗೆ ಟೆರ್ರಕೊಟ್ಟ ಎನ್ನುವ ಇಟಾಲಿಯನ್ ಹೆಸರಿಸಿದೆ. ಈ ಬಹುವಾಗಿ ಬಳಕೆಯಲ್ಲಿರುವ ಈ ಮಾತು ೧೨೨೦ರ ಸುಮಾರು ಸಿದ್ಧವಾಗಿರಬೇಕೆಂದು ಎಸ್.ಕೆ.ರಾಮಚಂದ್ರರಾವ್‌ರವರ ತಮ್ಮ 'ಕರ್ನಾಟಕ ಕಲೆಗಳು' ಎಂಬ ಗ್ರಂಥದಲ್ಲಿ ಅಭಿಪ್ರಾಯಪಟ್ಟಿದ್ದಾರೆ.

ಕುಂಬಾರರ ಬಗೆಗೆ ಜನಪದ ಶಿಲಾಶಾಸನ, ಶಿಷ್ಟಪದ ಸಾಹಿತ್ಯದಲ್ಲಿ ಹೇರಳವಾದ ದಾಖಲೆಗಳು ದೊರೆಯುತ್ತವೆ. ಕುಂಬಾರರ ಮನೆಯಿಂದ ಐರಾಣಿ ತರುವ ಹಿನ್ನೆಲೆಯ ಹಾಡು ಹೀಗಿದೆ!

"ಕುಂಬಾರ ಮನಿಯಾಗ ಜಂಬಾರವೇ ನಮ್ಮ
ರಂಬೀಗೆ ಅರುಣಿ ಕೊಡಬೇಕು ದ್ಯಾಮವ್ವ
ಕಂಕಣವೆ ಬ್ಯಾಗ ಹೊದಿಸಾವೆ॥

ಕುಂಬಾರ ಮನಿಯಾಗ ಜಂಬಾರವೇ ನಮ್ಮ
ನಿಂಬೀಗಿ ಹರಿನೀರ ತಿರುವ್ಯಾನೆ। ಗುಂಡಣ್ಣನ
ರಂಬಿ ಬರಿದು ಅರುಣ ಕೊಡುಬಾರ"[೧]

ಹೀಗೆ ಕುಂಬಾರರ ಪ್ರಾಚೀನತೆಯನ್ನು ನಾವು ಕ್ರಿ.ಶ.ಸುಮಾರು ೮ನೇ ಶತಮಾನದ ನೃಪತುಂಗನು ರಚಿಸಿರುವ 'ಕವಿರಾಜ ಮಾರ್ಗ'ದಲ್ಲಿ "ಕುಲಾಲಗೇಹಂಗಳೊಳು" ಕುಂಬಾರ ಮನೆಗಳಲ್ಲಿ "ಪರಚಕ್ರ ಬ್ರಾಂತಿಗಳ್" ಶ್ರೇಷ್ಠ ಚಕ್ರಗಳ – ತಿಗರಿಗಳ ತೀವ್ರ ವೇಗದ ಭ್ರಮಣವನ್ನು ಕುರಿತು ಹೇಳಲಾಗಿದೆ (ಕವಿರಾಜಮಾರ್ಗ ೩–೧೧೧) ಮಡಕೆ ಮಾಡಲು ಬೇಕಾದ ಮಣ್ಣನ್ನು ಅಗಿದು ದೊಡ್ಡ ದೊಡ್ಡ ಕುಳಿಗಳಾಗಿರುತ್ತಿದ್ದುದು. ಅಂಥ ಕುಳಿಯೊಂದರಲ್ಲಿ ಕುಳಿತ ಬೋಳಮಂಡೆಯ ಕುಂಬಾರನ ಸಂಗತಿಯೊಂದನ್ನು 'ನಯಸೇನ ಕವಿಯು ತನ್ನ 'ಧರ್ಮಾಮೃತಂ' ಕಾವ್ಯದಲ್ಲಿ ವಿವರಿಸುತ್ತಾನೆ. ಸುಮಾರು ೧೧೨೬ರ ಕಾಲದ ಶಾಸನವೊಂದು ಕುಂಬಾರ ಜಾತಿಯ ಬಮ್ಮಣ ಎನ್ನುವವನು ತಲೆಯನ್ನು ತೊಳೆದುಕೊಳ್ಳದ, ಅನ್ನವನ್ನು ಮುಟ್ಟದ ವೀರವ್ರತವನ್ನು ಕೈಕೊಂಡು ಕುಂಭೇಶ್ವರ ದೇವರ ಪ್ರತಿಷ್ಠೆ ಮಾಡಿಸಿದ ಸಂಗತಿಯನ್ನು ತಿಳಿಸುತ್ತದೆ.[೨] ಹರಿಹರ ಮಹಾಕವಿಯ ಕುಂಬಾರ ಗುಂಡಯ್ಯ ರಗಳೆಯ ಗುಂಡಯ್ಯನ ಅನನ್ಯ ಭಕ್ತಿ. ಆ ಭಕ್ತಿಗೆ ಮೆಚ್ಚಿ ಸಾಕ್ಷಾತ್ ಶಿವನೇ ಬಂದು ಕುಣಿದ ಭಕ್ತಿ ಪರವಶತೆಯ ಚಿತ್ರ ಸುಪ್ರಸಿದ್ಧ 'ಆಡದನಾಡಿದನಾಹಾ ಶಂಕರ' ಎಂದು ರಗಳೆಯ ಕವಿ ಹರಿಹರನು ಉದ್ಗರಿಸಿದರೆ, ಕುಂಬಾರರೆಲ್ಲರು ಗುಂಡಯ್ಯನಾಗಬಲ್ಲರೇ? ಮಡಿವಾಳರೆಲ್ಲರೂ ಮಾಚಯ್ಯನಾಗಬಲ್ಲರೇ? ಎಂದು ಶಿವಯೋಗಿ ಸಿದ್ಧರಾಮೇಶ್ವರ ಪ್ರಶ್ನಿಸುತ್ತಾನೆ.

ಕಾಯಕವಿಲ್ಲದೇ ಲಿಂಗಪೂಜೆ ಲೇಸಲ್ಲ ಎನ್ನುವ ತತ್ವದ ಶರಣರು ೧೨ನೇ ಶತಮಾನದಲ್ಲಿ ದೊಡ್ಡ ಕ್ರಾಂತಿಯನ್ನೇ ಮೊಳಗಿಸಿದರು. ವಿಶ್ವಮಾನವರಿಗೆ ಲೇಸನೆ

---

೧. ನಾಡ ಮೇಲೆಲ್ಲಾ ಹರಿದಾವೆ : ಕ.ರಾ.ಕೃ, ಪುಟ. ೮೧.

೨. "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ", ಡಾ. ಎಂ.ಚಿದಾನಂದಮೂರ್ತಿ, ಪು. ೧೭೬.

ಬಯಸಿದ ಕಲ್ಯಾಣದ ಅಣ್ಣ ಬಸವಣ್ಣನ ಸುತ್ತ ಅಜ್ಞಾನದಿಂದ ಜ್ಞಾನದತ್ತ ಎಲ್ಲರನ್ನು ಕರೆದೊಯ್ಯುವ ಶರಣರಲ್ಲಿ ಒಬ್ಬರಾದ ಭಕ್ತ ಕುಂಬಾರ ಗುಂಡಯ್ಯನು ಒಬ್ಬ. ಈ ಕುಂಬಾರ ಗುಂಡಯ್ಯ ಒಬ್ಬ ಚಾರಿತ್ರಿಕ ವ್ಯಕ್ತಿಯಾಗಿದ್ದು ಶಾಸನಗಳಲ್ಲಿ ನಮೂದಿತನಾಗಿರುವುದನ್ನು ಡಾ. ಎಂ.ಕಲಬುರ್ಗಿಯವರು ಗುರುತಿಸಿದ್ದಾರೆ.[೧] ಕ್ರಿ.ಶ. ಸು.೧೨೮೦ರ ಮರಡಿಪುರ ಶಾಸನದಲ್ಲಿ 'ನಂಬಿ ಕುಂಬಾರಗುಂಡ, ಅಂಡವಲ ಕರಿಕಾಲ ಚೋಳ' ಎಂದೂ ಕ್ರಿ.ಶ. ೧೨೦೦ರ ಅಬ್ಬಲೂರು ಸೋಮೇಶ್ವರ ದೇವಾಲಯದ ಪೌಳಿಯಲ್ಲಿ ಕುಂಬಾರ ಗುಂಡಯ್ಯನು ಕಾಯಕದಲ್ಲಿಯೇ ಕೈಲಾಸ ಕಂಡಂತ ಶಿವಶರಣ. ಕುಂಬಾರ 'ಗುಂಡನ ಮುಂದೆ ಬಂದಾಡಿದ ನಮ್ಮ ಶಿವನು' – ಎಂದು ಕೆತ್ತಲಾಗಿದ್ದು ಆತ ಕಾಯಕದಲ್ಲಿ ತನ್ಮಯನಾಗಿ ಮಣ್ಣು ತುಳಿಯುವ ಕುಣಿತದಲ್ಲಿ ಗಡಿಗೆ ಬಡಿಯುವ ತಾಳದಲ್ಲಿ ಶಿವನ ಗಣವನ್ನೆ ಕುಣಿಕುಣಿಸಿ ತೃಪ್ತಿಗೊಳಿಸಿದ ಭಕ್ತ ಶಿರೋಮಣಿ ಮನೆ ಬಾಗಿಲಿಗೆ ಶಿವನ ಕರೆಸಿದ ಶಿವ ಶರಣನೆ ಈ ಕುಂಬಾರ ಗುಂಡಯ್ಯ ಎಂದು ನಾವು ಅಧ್ಯಯನದಲ್ಲಿ ತಿಳಿಯಬಹುದು.

ಕುಂಬಾರ ಗುಂಡಯ್ಯನು ಭಕ್ತಿರಸದಲ್ಲಿ ಮಣ್ಣ ಕಲಸಿ ಕುಂಭ ಕಾಯಕದ ಮೋಡಿಯಲ್ಲಿ ಶಿವ ಕುಣಿಸಿದ ಪುಣ್ಯ ಭೂಮಿಯಾದ ಭಲುಂಕೆ, ಭಾಲಿಕೆ, ಭಾಲಿಕ್ಕೆ, ವಿಜಯಕಲ್ಯಾಣ ಇತ್ಯಾದಿ ಪರ್ಯಾಯ ಹೆಸರಿನ 'ಭಾಲ್ಕಿ' ಗುಂಡಯ್ಯನ ಜನ್ಮಭೂಮಿಯಾಗಿದೆ. ಇದು ಕರ್ನಾಟಕದ ಬೀದರ ಜಿಲ್ಲೆಯ ತಾಲ್ಲೂಕು ಆಗಿದೆ.[೨]

ಕಾಯಕದಲ್ಲಿ ಕರ್ಮಯೋಗಿಯಾಗಿ, ಪಾರಮಾರ್ಥದಲ್ಲಿ ತೇಜೋಮೂರ್ತಿಯಾಗಿ, ಭಕ್ತರಲ್ಲಿ ಭಕ್ತರಾಗಿ ಶರಣರಲ್ಲಿ ಶರಣರಾಗಿ, ಇತಿಹಾಸಿಕ ಮಹಾವ್ಯಕ್ತಿಯಾಗಿ, ವಚನಕಾರ್ತಿ ಧರ್ಮಪತ್ನಿ ಮಹಾಶರಣೆ ಕೇತಲದೇವಿಯೊಂದಿಗೆ ಸಂಸಾರಿಕರಾಗಿ ಭವ ಸಾಗರವನ್ನೇ ದಾಟಿದ ಮಹಾ ಶಿವಶರಣ ಈ ಗುಂಡಯ್ಯ. ಅಂದ ಚಂದಗಳಿಂದ ಚಿತ್ತಾರ ಕಲೆಯಿಂದ ಬಣ್ಣಬಣ್ಣಗಳಿಂದ ಗತಕಾಲದ ಇತಿಹಾಸವನ್ನು ಪ್ರತಿಬಿಂಬಿಸುವ ಕಲೆಯಾದ ಕಾಯಕ ಕುಂಭಕಲೆ, ದೇಶದ ಪ್ರತಿ ಹಳ್ಳಿಹಳ್ಳಿಗಳಲ್ಲಿಯೂ ಈ ಕಾಯಕದ ಅಸ್ತಿತ್ವ ಕಂಡುಬರುತ್ತದೆ. ಇತಿಹಾಸ ಪ್ರಸಿದ್ಧವಾದ 'ಹರಪ್ಪ ಮೆಹೆಂಜೊದಾರೂ' ಮುಂತಾದ ಸಂಸ್ಕೃತಿಗಳಲ್ಲಿ ಕುಂಬಾರ ಕಲೆಯ ಆಧಾರದ ಮೇಲೆ ಅಂದಿನ ನಾಗರಿಕತೆ, ಕಲೆ, ಸಂಸ್ಕೃತಿ ಕಾಲ ನಿರ್ಣಯಗಳನ್ನು ಇತಿಹಾಸ ಸಂಶೋಧಕರು ಗುರುತಿಸುವುದಕ್ಕೆ ಈ ಕಸಬು ವರದಾನವಾಗಿದೆ.

---

೧. ಡಾ. ಎಂ.ಎಂ.ಕಲಬುರ್ಗಿ ಅವರ "ಶಾಸನಗಳಲ್ಲಿ ಶಿವಶರಣರು", ಪುಟ. ೨೨.

೨. ಸಂಗ್ರಹ, ಕುಂಭನುಡಿ ತ್ರೈಮಾಸಿಕ ಪತ್ರಿಕೆ.

ಬಸವಾದಿ ಶಿವಶರಣರ ವಚನಗಳಲ್ಲಿ ಗುಂಡಯ್ಯನ ಉಲ್ಲೇಖ ಸಿಗುವುದರಿಂದ ಕಲ್ಯಾಣದ ಬಸವಣ್ಣನ ಸಮಕಾಲೀನನಾಗಿ ಕಂಡುಬರುತ್ತಾನೆ. 'ಅಂಬಿಗರ ಚೌಡಯ್ಯನು' ತನ್ನ ವಚನದಲ್ಲಿ ಹೀಗೆ ಹೇಳಿದ್ದಾನೆ.

"ನಂಬಿಯಣ್ಣ ಮಾಡುವ ಭಕ್ತಿ ನಾಡೆಲ್ಲ ಮಾಡುವದಯ್ಯ
ಕುಂಬಾರ ಗುಂಡಣ್ಣ ಮಾಡುವ ಭಕ್ತಿ ಊರೆಲ್ಲ ಮಾಡುವದಯ್ಯ"

ಎಂದಿದ್ದಾನೆ.

ಮತ್ತೊಬ್ಬ ಶ್ರೇಷ್ಠ ಆದ್ಯ ವಚನಕಾರನಾದ 'ಜೇಡರ ದಾಸಿಮಯ್ಯ' ಕುಂಬಾರ ಗುಂಡಯ್ಯನ ಕಂಡು ತನ್ನ ವಚನದಲ್ಲಿ ಕಂಡ ಅನುಭವ ಹೀಗಿದೆ:

"ನಂಬಿದ ಚೆನ್ನನಂಬಲಿಯನುಂಡ;
ಕೆಂಭಾವಿಯ ಭೋಗಣ್ಣನ ಹಿಂದಾಡಿ ಹೋದ;
ಕುಂಬಾರ ಗುಂಡಯ್ಯ ಕುಂಭದ ಗತಿಗೆ ಕುಕಿಲಿರಿದು ಕುಣಿದ,
ನಂಬದೆ ಕರೆವವರ ಹಂಬಲನೊಲ್ಲ ನಮ್ಮ ರಾಮನಾಥ"

ಈ ವಚನದಿಂದ ಕುಂಬಾರ ಗುಂಡಯ್ಯನ ವ್ಯಕ್ತಿತ್ವ ಕಾಣುತ್ತೇವೆ.

ಬಸವ ಪುರಾಣವನ್ನು ಬರೆದ ಭೀಮಕವಿ ಕ್ರಿ.ಶ. (ಸುಮಾರು ೧೩೬೯) ಈ ಕೃತಿಯಲ್ಲಿ ಕುಂಬಾರ ಗುಂಡಯ್ಯನ ಧರ್ಮಪತ್ನಿ 'ಕೇತಲೆಯ' ಹೆಸರು ಸೂಚಿಸಿದ್ದಾನೆ. ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣದಲ್ಲಿ ಕುಂಬಾರ ಗುಂಡಯ್ಯನ ಇತಿಹಾಸವನ್ನು ಕಾಣಿಸಿದ್ದಾನೆ. ಉತ್ತರ ದೇಶದ ಬಸವಲಿಂಗ ವಿರಚಿತ "ಬಸವೇಶ್ವರ ಪುರಾಣ ಕಥಾಸಾಗರ"ದಲ್ಲಿ ಬಲಿಕೆಪುರದ ಕುಂಬಾರ ಗುಂಡಯ್ಯ ಮತ್ತು ಸತಿಕೇತಲ ದೇವಿಯರ ಬಾಳಿನ ಕಥೆ ತುಂಬ ರಸವತ್ತಾಗಿ ಮೂಡಿದೆ. ಹೀಗೆ ಜಾನಪದ ಸಾಹಿತ್ಯದಲ್ಲಿ ಕುಂಬಾರ ಗುಂಡಯ್ಯ ಜನರ ಮನ ಮಂದಿರದಲ್ಲಿ ಭಾಗ್ಯಜ್ಯೋತಿಯಂತೆ ಬೆಳಗಿದ್ದಾನೆ.

ಜಾನಪದ ಸಾಹಿತ್ಯದಲ್ಲಿ ಈ ಕುಂಬಾರ ಗುಂಡಯ್ಯನ ಪ್ರಾಚೀನತೆಯನ್ನು ನಾವು ಅವಲೋಕಿಸಿದಾಗ ಈತನ ಪತ್ನಿ ಸಾಧ್ವಿಶಿರೋಮಣಿ, ಲಿಂಗನಿಷ್ಠಳಾದ, ಶ್ರೇಷ್ಠ ಶಿವಶರಣೆಯಾಗಿ, ವಚನಕಾರ್ತಿಯಾದ 'ಕೇತಲದೇವಿ' – ಬಸವಾದಿ ಪ್ರಮಥರ ಸಮಕಾಲೀನಳಾಗಿ ಚಿಜ್ಯೋತಿಯಂತೆ ಕಂಗೊಳಿಸಿದ್ದಾಳೆ. ಕೇತಲದೇವಿ ಕುಂಭೇಶ್ವರನ ಅಂಕಿತದಲ್ಲಿ ರಚಿಸಿದ ವಚನಗಳಲ್ಲಿ ಕೆಲವು ವಚನಗಳು ದೊರೆತಿರುವುದು

ದುರಾದೃಷ್ಟಕರವಾಗಿದೆ. ಆ ದಂಪತಿಗಳ ನಿತ್ಯ ಆರಾಧಿಸುವ ಕುಲದೇವರಾದ ಕುಂಭೇಶ್ವರ ದೇವಾಲಯ 'ಬಾಲ್ಕಿ'ಯಲ್ಲಿ ಇಂದಿಗೂ ನೋಡಸಿಗುತ್ತದೆ.

ಕೇತಲದೇವಿಯ ಅಂತರಂಗದಿಂದ ಹೊರಹೊಮ್ಮಿದ ವಚನ ರತ್ನಗಳಿಂದ ಆಕೆ ರಚಿಸಿರುವ ಒಂದು ವಚನ ಈ ರೀತಿ ಇದೆ.

"ಹದಮಣ್ಣಲ್ಲದೆ ಮಡಕೆಯಾಗಲಾರದು;
ವ್ರತಹೀನನ ಬೆರೆಯಲಾಗದು;
ಬೆರೆದಡೆ ನರಕ ತಪ್ಪದು;
ನಾನೊಲ್ಲೆ ಬಲ್ಲೆನಾಗಿ ಕುಂಭೇಶ್ವರಾ;"

"ಕೊಟ್ಟಡಕೆಯ ಕಟ್ಟಲು ಬಲಿವುದೇ?
ವ್ರತ ಹೋದಲ್ಲಿ ವ್ರತವಿಪ್ಪುದೆ?
ಕೆಟ್ಟ ಕಣ್ಣಿಂಗೆ ದೃಷ್ಟಿಯುಂಟೇ?
ಭವಹರ ಕುಂಭೇಶ್ವರ ಲಿಂಗದಲ್ಲಿ"

(ಸಂಗ್ರಹ ಹಿ.ಗೂ.ದುಂಡ್ಯಪ್ಪ ಹರಿಹರ "ಇತಿಹಾಸದಲ್ಲಿ ಕುಂಬಾರ ಗುಂಡಯ್ಯ" ಕುಂಭನುಡಿ ಪತ್ರಿಕೆ ಪ್ರಕಟ).

ಹೀಗೆ ಕೇತಲದೇವಿ ತನ್ನ ವಚನದಲ್ಲಿ ವ್ರತನಿಷ್ಠೆಯ ಸೂಕ್ಷ್ಮಾತಿಸೂಕ್ಷ್ಮ ವಿಚಾರಗಳನ್ನು ಚಿಂತನ-ಮಂಥನ ಮಾಡುವ ಪ್ರಜ್ಞೆ ಅಂದಿನವರಿಗೆ ರಕ್ತಗತವಾಗಿತ್ತು. ಇದು ಕನ್ನಡಿಗರಿಗೆ ವಚನಕಾರರು ನೀಡಿದ ಹೆಮ್ಮೆಯ ಕೊಡುಗೆ. ಶುದ್ಧ ಚಾರಿತ್ರೆಯಿಂದ ಮಾನವನ ಬದುಕು ಹಸನಾಗಬೇಕು. ಬಾಳು ಬಂಗಾರವಾಗಬೇಕು. ಇದು ಈ ಶಿವಶರಣೆಯ ಹೆಬ್ಬಯಕೆಯಾಗಿದೆ. ಇಲ್ಲಿಯವರೆಗೆ ದಕ್ಷಿಣ ಭಾರತದ ಕುಂಬಾರರ ಪ್ರಾಚೀನತೆಯನ್ನು ಯಳಂದೂರಿನ ಶಾಸನವೊಂದರಲ್ಲಿ ಕುಂಬಾರರ ಸಾಮಾಜಿಕ ಸ್ತರದಲ್ಲಿ ತಮ್ಮ ವೃಂದ ಉನ್ನತವಾದುದೆಂದು ತಮ್ಮ ಕೆಲವು ಹಕ್ಕುಗಳಿಗಾಗಿ ಸತ್ವ ಪರೀಕ್ಷೆಗೆ ಒಳಗಾಗಿ 'ತುಪ್ಪದ ದಿವ್ಯ'ವನ್ನು ಪ್ರತ್ಯಕ್ಷಮಾಡಿ ಗೆಲಿದ ಘಟನೆಯೊಂದು ಹೀಗೆ ನಿರೂಪಿತವಾಗಿದೆ.

"ಶ್ರೀ ಗೌರೀಶ್ವರ ರಾಮರಾ
ಜನಾಯಕರ ಕಾಲದಲ್ಲಿ ಕುಂಭಾ
ರಸ್ವಾಮಿಗಳ ಸಾಸನದ ಕ್ರಮ। ಚಾ
ಮ। ಅಂಸಮಾನ। ಹೊಂನ। ಧೂಮ। ಚಂ
ಡ। ಇವರು ನಾಯಂದರು, ಅಗಸರು

ಕುಂಬಾರರಿಗೆ ಕಾಲುಗುರು ಮೇಲುಕಟ್ಟು
ಯಿಲ್ಲಯನಲಾಗಿ ಕುಂಬಾರಸೆಟ್ಟಿಗಳು
ಉಂಟುಯೆಂದು ಹರದನಹಳ್ಳಿಯ
ಲ್ಲಿ ದಿವ್ಯಲಿಂಗೇಶ್ವರನ ಮುಂದೆ ತುಪ್ಪದ
ಲ್ಲಿ ಕೈಯಿಕ್ಕಿ ಗೆದ್ದಾಗ ಬರೆದ ಶಾಸನ ಕ್ರಮ
ಕುಂಭರರಿಗೆ ಕಾಲುಗುರು ತೆಗಲುಣ ಮೇಲ ಕ
ಟ್ಟು ಕುಟ್ಟುಣಯೆಂದು ಭರದ ಶಾಸನ"[೧]

ಕುಂಬಾರ ವೃಂದದಲ್ಲಿ ನಡೆದಿರಬಹುದಾದ ಒಂದು ಮದುವೆ ಅಥವಾ ಉತ್ಸವದ ಪ್ರಸಂಗದಲ್ಲಿ ನಾಯಂದರಿಂದ ಕುಂಬಾರರು ಕಾಲುಗುರು ತೆಗೆಸಿಕೊಳ್ಳುವ ಹಕ್ಕು ಇಲ್ಲ, ಎಂದೂ ಅಗಸರಿಂದ ಅವರ ಮಂಟಪ ಅಥವಾ ಹಂದರಕ್ಕೆ ಬಟ್ಟೆಯ ಮೇಲ್ಕಟ್ಟು ಕಟ್ಟಿಸಿಕೊಳ್ಳುವ ಹಕ್ಕು ಇಲ್ಲ ಎಂದೂ ವಾದಿಸುತ್ತಾರೆ. ಅವರೆಲ್ಲ ಕೂಡಿ ಇದಕ್ಕೆ ಪರಿಹಾರ ಕಂಡುಕೊಂಡದ್ದು ಶ್ರೀ ಸಿದ್ದಲಿಂಗೇಶ್ವರರಿಗೆ ಗುರುಗಳಾಗಿದ್ದ ಗೋಸಲ ಯತಿಯ ಗ್ರಾಮ ಹರದನಹಳ್ಳಿಯ ದಿವ್ಯಲಿಂಗೇಶ್ವರನ ಸಮಕ್ಷಮದಲ್ಲಿ ಕುಂಬಾರರು ಕುದಿವ ತುಪ್ಪದಲ್ಲಿ ಕೈಯಿಟ್ಟು ಸತ್ವಪರೀಕ್ಷೆಯಲ್ಲಿ ಗೆಲ್ಲುತ್ತಾರೆ. ಆಗ ಕುಂಬಾರರಿಗೆ ನಾಯಂದರು ಕಾಲುಗುರು ತೆಗೆಯುವುದು ಉಂಟು. ಅಗಸರು ಕಟ್ಟುಕಟ್ಟುವುದು ಉಂಟು ಎಂದು ಶಾಸನದಲ್ಲಿ ಬರೆಸಲಾಯಿತು. ಜಾತಿಪದ್ಧತಿಯ ಗಾಢ ಪ್ರಭಾವದ ನಮ್ಮ ಸಾಮಾಜಿಕ ಪರಿಸರದಲ್ಲಿ ಕುಂಬಾರರು ತಮ್ಮ ಉನ್ನತ ಸ್ತರವನ್ನು ಕಾಪಾಡಿಕೊಳ್ಳಲು ಸಂಘರ್ಷ ನಡೆಸುತ್ತಿದ್ದರು ಎನ್ನುವುದು ಸ್ಪಷ್ಟ. ಕುಂಬಾರರ ಪ್ರಾಚೀನತೆ ಮತ್ತು ಮೂಲ ಇತಿಹಾಸವನ್ನು ನಾವು ವಿವಿಧ ಪ್ರದೇಶಗಳಲ್ಲಿ ವಿವಿಧ ರೀತಿಯ ಕಲೆಗಾರಿಕೆ ಹಿನ್ನೆಲೆಯಲ್ಲಿ ಅಧ್ಯಯನವನ್ನು ಕಾಣಬಹುದಾಗಿದೆ.

೧. E.C.IV ಯಳಂದೂರ ೨. ಜಾನಪದ ಸಾಹಿತ್ಯ ದರ್ಶನ – ೨.

# ಅಧ್ಯಾಯ - ೩

# ಕುಂಬಾರರ ಸಾಮಾಜಿಕ ಮತ್ತು ಧಾರ್ಮಿಕ ನೆಲೆ

**ಜನಸಮುದಾಯ:**

ಸಾಮಾನ್ಯವಾಗಿ ಕರ್ನಾಟಕದಲ್ಲಿ ಕಂಡುಬರುವ ಇನ್ನಿತರ ಜನಸಮುದಾಯಗಳಿಗಿಂತ ಈ ಕುಂಬಾರರು ಪ್ರತ್ಯೇಕವಾದ ಹಾಗೂ ವಿಶಿಷ್ಟವಾದ ಜೀವನ ನಡೆಸುತ್ತಾರೆ. ಇತರ ಯಾವುದೇ ಜನಸಮುದಾಯಗಳ ಜೊತೆಗೆ ತಮ್ಮನ್ನು ಗುರುತಿಸಿಕೊಳ್ಳಲು ಇಷ್ಟಪಡದ ಇವರ ವಾಸಸ್ಥಳಗಳು ಊರ ಸಂಸ್ಕೃತಿಗಿಂತ ಭಿನ್ನವಾಗಿದ್ದು ತಮ್ಮ ಆಚಾರ-ವಿಚಾರಗಳಲ್ಲಿ ಶುದ್ಧವಾಗಿ ಸಂಪ್ರದಾಯಬದ್ಧವಾಗಿ ನಡೆದುಕೊಂಡು ಜೀವನ ಸಾಗಿಸುತ್ತಾರೆ. ಇವರು ತಾವು ವಾಸಿಸುವ ಮನೆಗಳಿಗೆ 'ಹಟ್ಟಿ' ಎಂದು ಕರೆಯುತ್ತಾರೆ. ಯಾವುದೇ ಕೆಲಸ ನಡೆಯಬೇಕಾದರೂ ಯಜಮಾನನ ತೀರ್ಮಾನವಿರುತ್ತದೆ. ಕುಂಬಾರರು ಮನೆಯ ಸುತ್ತಲು ಬೇಲಿ ಇರುತ್ತದೆ. ಬೇಲಿಯ ಜೊತೆಗೆ ಕಳ್ಳಿಗಿಡಗಳನ್ನು ಬೆಳಸುತ್ತಾರೆ. ಈ ಬೇಲಿಯನ್ನು ದಾಟಿ ಹಟ್ಟಿಯ ಒಳಗೆ ಪ್ರವೇಶಿಸಲು ಯಾವುದಾದರೊಂದು ಕಡೆ ಅಥವಾ ಎರಡು ಕಡೆ ಹೊಳೆ ಬಾಗಿಲು ಬಿಡುತ್ತಾರೆ. ಈ ಬೇಲಿಯನ್ನು ಹಾಕಲು ಕಾರಣವೆಂದರೆ ಕುಂಬಾರಿಕೆಗೆ ಬೇಕಾದ ಮಣ್ಣನ್ನು ಕದಿಯಬಾರದು ಎಂದು ಬೇಲಿ ನಿರ್ಮಿಸುತ್ತಾರೆ. ಈ ಬೇಲಿಗೆ ಹೊಂದಿಕೊಂಡಂತೆ ತೆಂಗಿನಗರಿ ಬಾದೆಕಲ್ಲು ಹಂಚಿಕಡ್ಡಿ ಹುಲ್ಲು ಮೊದಲಾದ ತಮಗೆ ಹತ್ತಿರದಲ್ಲಿ ನಿಸರ್ಗದಲ್ಲಿ ಸಿಕ್ಕುವ ಹುಲ್ಲುಗಳಿಂದ ಹೊಂದಿಸಿಕೊಂಡಿರುತ್ತಾರೆ. ಇತ್ತೀಚಿನ ಪೀಳಿಗೆ ಜೊತೆಗೆ ಹಣವುಳ್ಳ ಕುಂಬಾರರು ಮಾಳಿಗೆ ಮನೆಯ ಜೊತೆಗೆ ತಡೆಗೋಡೆಯನ್ನು ನಿರ್ಮಿಸಿಕೊಂಡಿರುವುದನ್ನು ಕಾಣುತ್ತೇವೆ. ಮನೆಕಟ್ಟುವುದರಲ್ಲಿ ಬದಲಾವಣೆ ಕಾಣುತ್ತೇವೆಯೇ ಹೊರತು ಇವರ ಆಚಾರ-ವಿಚಾರ ಸಂಸ್ಕೃತಿಯಲ್ಲಿ ಯಾವ ಬದಲಾವಣೆಯು ಕಂಡುಬರುವುದಿಲ್ಲ ಎಂದು ಅಧ್ಯಯನದಲ್ಲಿ ತಿಳಿಯ-ಬಹುದಾಗಿದೆ.

ಈ ಕುಂಬಾರರ ಸಾಮಾಜಿಕ ಹಿನ್ನೆಲೆಯನ್ನು ಗಮನಿಸಿದಾಗ ಪ್ರತಿ ಕುಂಬಾರರ ಹಟ್ಟಿಯಲ್ಲಿ ಸಾಮಾನ್ಯವಾಗಿ ಆವಿಗೆ ಕಂಡುಬರುತ್ತದೆ. ಈ ಆವಿಗೆಯನ್ನು ಕೆಮ್ಮಣ್ಣುವಿನಿಂದ ಇಟ್ಟಿಗೆ ಬಳಸಿ ಚತುರ್ಥಾಕಾರವಾಗಿ ಕಟ್ಟಿ ಅದರ ಮುಂದೆ ಸೌದೆಯನ್ನು ಹಾಕಲು ಜಾಗಬಿಟ್ಟಿರುತ್ತಾರೆ. ಅಲ್ಲದೆ ಅವಿಗೆಯ ಒಳಬದಿಗೆ ಅಲ್ಲಲ್ಲಿ ಒಣಗಿದ ಹುಲ್ಲು ಸೀಳಿದ ಚಕ್ಕೆಗಳು ಪಾತ್ರೆಗೆ ತಾಗದಂತೆ ಗೂಡುಗಳನ್ನು ಸಾಲುಸಾಲಾಗಿ ಜೋಡಿಸಿರುವಂತೆ ತಳಭಾಗದಲ್ಲಿ ಉರಿಮಾಡಿದಾಗ ಮಡಿಕೆಗಳಿಗೆ ಮತ್ತು ಕುಂದಗಳಿಗೆ

ವ್ಯಾಪಕ ಮತ್ತು ಸಮಾನ ಮಂದೋಷ್ಣ ಪೂರೈಕೆಯಾಗಿ ಆ ಮಡಕೆಯಲ್ಲಿರುವ ತೇವಾಂಶ ನಿವಾರಣೆಗೊಂಡು ಸಟ್ಟು ಮಡಕೆಗಳು ಗಡಸು ನಿಶ್ಚಿತ ಗಾತ್ರ ಗಟ್ಟಿ ಆಕಾರಗಳನ್ನು ಹೊಂದಿ ಸಿದ್ಧವಾಗುವ ರೀತಿಯಲ್ಲಿ ಆವಿಗೆಯನ್ನು ನಿರ್ಮಿಸಿರುತ್ತಾರೆ.

ಕುಂಬಾರರಲ್ಲಿ ಜನಸಮುದಾಯವು ಸಾಮಾಜಿಕ ಸಂಘಟನೆಯಿಂದ ಕೂಡಿರುತ್ತದೆ. ಕೆಲವು ಕುಟುಂಬಗಳು ಸೇರಿ ಒಂದು ಕುಲ ಹಲವು ಕುಲಗಳು ಸೇರಿ ಒಂದು ತಂಡ ಹಲವು ತಂಡಗಳು ಸೇರಿ ಒಂದು ಊರು ಸಮುದಾಯ (Community) ಹೀಗೆ ಪ್ರಾರಂಭವಾಗುತ್ತದೆ. ಇವರು ತಮ್ಮ ಜನಾಂಗದ ವ್ಯಾಪ್ತಿಯೊಳಗೆ ಬರುತ್ತದೆ. ಕುಂಬಾರರಲ್ಲಿ ಯಾವುದೇ ವ್ಯಾಜ್ಯ ಸಂಭವಿಸಿದಾಗಲೂ ಕುಲದ ಯಜಮಾನರುಗಳೇ ಪರಿಹರಿಸುತ್ತಾರೆ. ಇಲ್ಲಿ ಪರಿಹರಿಸಲಾರದ ವಿಷಯವಿದ್ದರೆ ಮಾತ್ರ ಒಟ್ಟಾರೆ ಊರಿನ ಯಜಮಾನರಿಗೆ ವಹಿಸುತ್ತಾರೆ. ವ್ಯಾಜ್ಯವನ್ನು ತೀರ್ಮಾನ ಮಾಡಲು ಊರಿನ ಜನರು ದೇವಸ್ಥಾನದ ಬಳಿ ಸೇರುತ್ತಾರೆ. ಏಕೆಂದರೆ ದೇವಸ್ಥಾನ ಹಿಂದೂ ಸಂಸ್ಕೃತಿಯಲ್ಲಿ ಪವಿತ್ರವಾದ ತಾಣವಾಗಿದ್ದು ಸುಳ್ಳು ಹೇಳಲು ದೇವರಿಗೆ ತಪ್ಪನ್ನು ಒಪ್ಪಿಕೊಳ್ಳುತ್ತಾರೆಂದು ಈ ನ್ಯಾಯ ದಂಡ ವಿಧಿಸುತ್ತಾರೆ. ಈ ಯಜಮಾನರುಗಳು ಕೊಟ್ಟ ತೀರ್ಪನ್ನು ಪ್ರತಿಯೊಬ್ಬರು ಒಪ್ಪಿಕೊಂಡು ಕುಲಕ್ಕೆ ದಂಡಕೊಡುತ್ತಾರೆ. ಹಿಂದಿನ ಕಾಲದಲ್ಲಿ ಇಂತಹ ತಪ್ಪು ಮಾಡಿದವರಿಗೆ ಬಹಿಷ್ಕಾರನವನ್ನು (ಒಂದು ತಿಂಗಳು ಅಥವಾ ಅದಕ್ಕಿಂತ ಹೆಚ್ಚು) ಹಾಕುತ್ತಿದ್ದರು. ಇಂತಹ ಕೆಲವು ಕುಂಬಾರರ ಸಮುದಾಯದಲ್ಲಿ ಕಾಣುತ್ತೇವೆ. ಈಗ ಆಧುನಿಕತೆಯ ಪ್ರಭಾವದಿಂದ ಕೆಲವರು ಪೊಲೀಸ್ ಸ್ಟೇಷನ್‌ಗೆ ಮೊರೆಹೋಗಿ ಬಗೆಹರಿಸಿಕೊಂಡು ಬರುವುದು ಉಂಟು. ಕುಂಬಾರ ಜಾತಿಯಲ್ಲಿ ಅಪರಾಧ ಮಾಡಿದ ವ್ಯಕ್ತಿ ಮನೆದೇವರ ಮೇಲೆ ಮತ್ತು ತಿಗುರಿಕೋಲನ್ನು ಮುಟ್ಟಿ ಪ್ರಮಾಣ ಮಾಡಲು ಹಿಂಜರಿಯುತ್ತಾರೆ. ಕಾರಣ ಅವರಿಗೆ ಅವು ದೇವರಿಗೆ ಸಮ ಎಂಬ ಭಾವನೆ.

ಮೇಲೆ ತಿಳಿಸಿದ ಎಲ್ಲಾ ವಿವರಣೆಗಳು ಕುಂಬಾರರ ಜನಸಮುದಾಯವು ಎಲ್ಲಾ ಸಂಪ್ರದಾಯ ಆಚರಣೆಗಳನ್ನು ಈಗಲೂ ನಡೆಸುತ್ತಾ ಬಂದಿದ್ದಾರೆ. ಅವರು ಆಧುನಿಕತೆಗೆ ಒಳಗಾಗಿದ್ದರೂ ತಮ್ಮ ಪೂರ್ವಜರು ನಡೆಸಿಕೊಂಡು ಬಂದಂತಹ ಎಲ್ಲಾ ಕ್ರಮಗಳನ್ನು ಮುಂದುವರೆಸಿಕೊಂಡು ಬಂದಿದ್ದಾರೆ.

**ಕುಟುಂಬದ ವ್ಯವಸ್ಥೆ:**

ಕುಂಬಾರರ ಸಾಮಾಜಿಕ ಸ್ಥಿತಿಗತಿಗಳು ಇಲ್ಲಿರುವ ಪ್ರಾದೇಶಿಕತೆಯ ವ್ಯವಸ್ಥೆಯ ಮೇಲೆಯೇ ಅವಲಂಬಿತವಾಗಿದ್ದು ಈ ಜೀವನ ವ್ಯವಸ್ಥೆಗೆ ಕುಂಬಾರರು

ಅವಲಂಬಿತರಾಗಿದ್ದಾರೆ. ಸಾಮೂಹಿಕ ನೆಲೆಗೆ ಹಿನ್ನೆಲೆಯಾಗಿ ಬರುವ ಕೌಟುಂಬಿಕ ನೆಲೆಯ ಮುಖ್ಯವಾಗಿರುವುದು ಈ ವಿಭಕ್ತ ಕುಟುಂಬಗಳೇ ಹೆಚ್ಚಾಗಿದ್ದು ಕೆಲವೊಂದು ಮನೆಗಳಲ್ಲಿ ಮಾತ್ರ ಅವಿಭಕ್ತ ಕುಟುಂಬಗಳನ್ನು ಇಂದಿಗೂ ಮುಂದುವರೆಸಿಕೊಂಡು ಹೋಗುತ್ತಾ ಆ ಕುಟುಂಬದಲ್ಲಿರುವ ಮೂರು ತಲೆಮಾರಿನವರು ಪರಸ್ಪರ ಹೊಂದಾಣಿಕೆಯಿಂದ ಸಹಬಾಳ್ವೆ ಮಾಡುತ್ತಿರುತ್ತಾರೆ. ಕುಂಬಾರ ಜನರು ತಾವು ಇಟ್ಟುಕೊಂಡ ಹೆಸರು ಅವರ ಜಾತಿಯನ್ನು ಬಹುಬೇಗ ಪ್ರತಿಬಿಂಬಿಸುತ್ತವೆ. ಇವರ ಹೆಸರುಗಳು ಬೇರೆ ಜಾತಿಯವರಿಗಿಂತ ಭಿನ್ನವಾಗಿರುತ್ತದೆ. ಸಾಮಾನ್ಯವಾಗಿ ಇವರು ತಮ್ಮ ಮನೆ ದೇವರುಗಳ ಹೆಸರುಗಳನ್ನೇ ಮಕ್ಕಳಿಗೂ ಇಟ್ಟಿರುತ್ತಾರೆ. ಇದೇ ರೀತಿ ಆ ಕುಟುಂಬದ ಹೆಸರುಗಳನ್ನು ನಾವು ಅಧ್ಯಯನದಲ್ಲಿ ತಿಳಿದಾಗ ಈ ರೀತಿ ಕಾಣಬಹುದು. ಇವರ ಹೆಸರಿನ ಮುಂದೆ "ಶೆಟ್ಟಿ" ಎಂಬ ಜಾತಿಸೂಚಕ ಪದವನ್ನು ಕಾಣುತ್ತೇವೆ. ಉದಾ: ನಿಂಗಶೆಟ್ಟಿ, ವೆಂಕಟಶೆಟ್ಟಿ, ಶ್ರೀನಿವಾಸಶೆಟ್ಟಿ, ಜವರಶೆಟ್ಟಿ.... ಹೀಗೆ ಅವರು ಮಾಡುವ ಕೆಲಸಗಳನ್ನು ಪ್ರತಿಬಿಂಬಿಸಲು ಅವರ ಹೆಸರಿನ ಮುಂದೆ ಅವರವರ ಕೆಲಸದ ವಿಶೇಷಗಳನ್ನು ಸೇರಿಸುತ್ತಾರೆ. ಹಾಗೆಯೇ ಹೆಂಗಸರಲ್ಲಿ ಚಿಕ್ಕಮ್ಮ, ಕೆಂಚಮ್ಮ, ಕಾಂತಮ್ಮ, ವೆಂಕಟಮ್ಮ, ತಿಮ್ಮಮ್ಮ ಮೊದಲಾದ ಹೆಸರನ್ನು ಕಾಣಬಹುದು. ಇತ್ತೀಚೆಗೆ ಕೆಲವು ಮನೆತನಗಳಲ್ಲಿ ಅಕ್ಷರ ಅಭ್ಯಾಸ ಮಾಡಿದವರು ಆಧುನಿಕತೆಗೆ ಒಳಗಾಗಿ ಹೆಸರಿನಲ್ಲಿ ಮಾತ್ರ ತಮ್ಮ ಮಕ್ಕಳಿಗೆ ಆಧುನಿಕ ಕಾಲದ ಹೆಸರನ್ನು ಇಟ್ಟಿದ್ದಾರೆ. ಆದರೆ ಇತ್ತೀಚಿನ ಆಧುನಿಕ ಪ್ರಪಂಚದ ಯುಗದಲ್ಲಿ ಹೆಸರುಗಳ ಬದಲಾವಣೆಯನ್ನು ಕಾಣುತ್ತೇವೆ. ಲಕ್ಷ್ಮಿ, ಸರಸ್ವತಿ, ಗೌರಿ ಮುಂತಾದ ಹೆಸರುಗಳನ್ನು ಕೆಲವೇ ಮನೆಗಳಲ್ಲಿ ಮಾತ್ರ ನಾವು ನೋಡಬಹುದಾಗಿದೆ.

ಕುಂಬಾರರ ಮನೆಗಳಲ್ಲಿ ಕುರಬಾನು ಸೋಲು (ಮಡಿಕೆಯ ಸಾಲು) ಒಂದರ ಮೇಲೊಂದರಂತೆ ಮಡಕೆಗಳನ್ನು ಇಟ್ಟು ಅವುಗಳಲ್ಲಿ ತಮ್ಮ ಜೀವನಕ್ಕೆ ಅವಶ್ಯಕತೆಯಾದ ಕಾಳುಕಡ್ಡಿ (ಆಹಾರಪದಾರ್ಥ)ಗಳನ್ನು ತುಂಬಿಕೊಂಡಿರುತ್ತಾರೆ. ಈ ಮಡಕೆ ನೋಡುವುದಕ್ಕೆ ಒಂದು ರೀತಿಯ ಆಕರ್ಷಣೆಯನ್ನು ಬೀರುತ್ತವೆ. ಇವುಗಳನ್ನು 'ಅರ್ರಿ' ಎಂದು ಕರೆಯುತ್ತಾರೆ. ಇವುಗಳನ್ನು ನೋಡುವುದಕ್ಕೆ ಕರ್ರಗೆ ಮಿಂಚಿನಂತೆ ಹೊಳೆಯುತ್ತವೆ. ಇದೇ ತರಹದ ಮಡಕೆ, ಕುಡಿಕೆಗಳಲ್ಲಿ ಹಾಲು, ಮೊಸರು, ಬೆಣ್ಣೆ, ತುಪ್ಪವನ್ನು ತುಂಬಿ ಗುಡಿಸಲಿನ ಮನೆಗಳಲ್ಲಿ ಮತ್ತು ಇತರ ಮನೆಗಳ ಸೂರಿ (ಜಂತೆ)ನಲ್ಲಿ ತೂಗುಹಾಕಿರುತ್ತಾರೆ.

ಈ ತರಹದ ಮಡಕೆ, ಕುಡಿಕೆ, ಗಡಿಗೆಯ ವಸ್ತುಗಳನ್ನು ಕುಂಬಾರರು ಬಳಸುತ್ತಿದ್ದರು. ಸಾಮೂಹಿಕ ನೆಲೆಯಲ್ಲಿ ಕುಂಬಾರರ ವೈಯಕ್ತಿಕ ನೆಲೆಯಲ್ಲಿ ಅವರವರ

ಸಂಪ್ರದಾಯದಲ್ಲಿ ಅಲ್ಪಸ್ವಲ್ಪ ಭಿನ್ನತೆಗಳಿರುತ್ತವೆ. ಕೆಲವು ಕಡೆ ಕುಂಬಾರರು ವೈಯಕ್ತಿಕ ನೆಲೆಯ ಜೀವನವನ್ನು ನಡೆಸುತ್ತಾರೆ. ಇವರು ಮುಖ್ಯವಾಗಿ ಊಟ, ಉಡುಗೆ, ತೊಡುಗೆಯ ಜೊತೆಗೆ ಕೌಟುಂಬಿಕ ಬಾಂಧವ್ಯದ ಮೂಲಕ ಗುರುತಿಸಬಹುದು. ಈ ಜನರ ಊಟ ತುಂಬ ಸರಳವಾಗಿರುತ್ತದೆ. ಒಕ್ಕಲುತನ ಪ್ರಧಾನವಾಗಿರುವ ನಮ್ಮ ಹಳ್ಳಿಗಳಲ್ಲಿ ಕುಂಬಾರ ಬಹುಮುಖ್ಯ ಗುಂಪು. ಇವರು ತಮ್ಮ ಭೂಮಿಯಲ್ಲಿ ರಾಗಿ, ನವಣೆ, ಭತ್ತ, ಅವರೆ, ಹತ್ತಿ, ಕಡಲೆಕಾಯಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಕಾಡಿನಲ್ಲಿ ಸಿಗುವ ಕೆಲವು ತಿನ್ನಬಹುದಾದ ಸೊಪ್ಪನ್ನು ತಂದು ಅದನ್ನು ತೊಳೆದು ಅದಕ್ಕೆ ಮೆಣಸಿನಕಾಯಿ ಮುರಿದುಹಾಕಿ ಉಪ್ಪು, ಬೆಳ್ಳುಳ್ಳಿ, ಈರುಳ್ಳಿ ಹಾಕಿ ಸೊಪ್ಪಿನ ಸಾರನ್ನು ತಯಾರಿಸುತ್ತಾರೆ. ಇದು ಅವರಿಗೆ ಶ್ರೇಷ್ಠವಾದ ಆಹಾರ ಪದ್ಧತಿಯಾಗಿದೆ. ಇವರು ಸಸ್ಯಾಹಾರದ ಜೊತೆಗೆ ಕೆಲವು ಹಬ್ಬ ಹರಿದಿನಗಳಲ್ಲಿ ಮಾಂಸದ ಅಡುಗೆಯನ್ನು ಸೇವಿಸುತ್ತಾರೆ. ಮೀನು, ಕೋಳಿ, ಕುರಿ ಅಡುಗೆ ಮಾಡಿ ಕುರಿಮಾಂಸದ ಅಡುಗೆಯನ್ನು ಮಾತ್ರ ಇವರು ದೇವರಿಗೆ (ತಮ್ಮ ಮನೆಯ) ನೈವೇದ್ಯವನ್ನು ಮಾಡಿ ಕುಟುಂಬ ವರ್ಗದವರೆಲ್ಲ ಸಾಮೂಹಿಕವಾಗಿ ಭೋಜನವನ್ನು ಮಾಡುತ್ತಾರೆ.

ಕುಂಬಾರ ಬಹುಮುಖ್ಯವಾಗಿ ಒಕ್ಕಲು ಕುಟುಂಬಗಳಿಗೆ ವರ್ಷಾವಧಿ ಅಗತ್ಯವಾಗುವ ಕುಡಿಕೆ ಮಡಿಕೆಯಿಂದ ಹಿಡಿದು ಹರವಿ, ಗಡಿಗೆ, ಬೃಹತ್‌ಗಾತ್ರದ ರಂಜಣಿಗೆ, ಹಂಚು, ಹರನಾಳಿಗೆ ಹಂಚು ಒಳಗಟ್ಟಿಯ ದೊಡ್ಡ ದೊಡ್ಡ ಕೊಳವೆಗಳವರೆಗೆ ಬಗೆಬಗೆಯ ಸಾಮಾನುಗಳನ್ನು ಪೂರೈಸುವ ಹೊಣೆ ಕುಂಬಾರರದೇ ಸಾಮಾನ್ಯವಾಗಿ ಕುಂಬಾರರು ಪ್ರತಿಯೊಬ್ಬರ ಕಣಕ್ಕೂ ಹೋಗಿ ತನ್ನ ಆಯವನ್ನು ಸಂಗ್ರಹಿಸುವುದಿಲ್ಲ. ಅಂಥ ಪ್ರಸಂಗಗಳಲ್ಲಿ ಕೃಷಿಕರ ಮನೆಗಳಿಂದ ತನ್ನ ಆಯವನ್ನು ಎತ್ತುತ್ತಾನೆ. ಅಥವಾ ಅವರೇ ಕುಂಬಾರನ ಮನೆಗೂ ತಂದುಹಾಕುತ್ತಾರೆ. ಕೃಷಿಕರಲ್ಲದವರು ಕುಂಬಾರಗಿತ್ತಿ ತಲೆಯಮೇಲೆ ಹೊತ್ತು ಕೇರಿಕೇರಿ ತಿರುಗಿ ಮಡಕೆ ಕುಡಿಕೆ ಮಾರಿದಾಗ ಅವುಗಳನ್ನು ಕೊಂಡು ಅದಕ್ಕೆ ಪ್ರತಿಯಾಗಿ ಕಾಳು, ಹಣಕೊಡುತ್ತಾರೆ. ಬಹುಶಃ ಈ ದೃಷ್ಟಿಯಿಂದಲೇ ಕುಂಬಾರರಿಗೆ ತೆರಿಗೆ ವಿಧಿಸಿದ ಉಲ್ಲೇಖಗಳುಂಟು.

"ಯುಗಾದಿಯ ಪಾಡ್ಯ, ಕುಂಬಾರ ತಾನು ಸಿದ್ಧಗೊಳಿಸಿದ ಹೊಸ ಮಡಕೆಯಲ್ಲಿ ಒಂದನ್ನು ಗ್ರಾಮದೇವತೆಗೆ ಇನ್ನೊಂದನ್ನು ತಮ್ಮ ಗುರುವಿಗೆ ಅಥವಾ ಮಠಕ್ಕೆ ಕೊಟ್ಟು ಬರುತ್ತಾನೆ. ಆ ಬಳಿಕ ತನ್ನ ಸಾಮಾನುಗಳನ್ನು ಆತ ಮಾರಿಕೊಳ್ಳಬಹುದು. ಮದುವೆಯ ಸಂದರ್ಭದಲ್ಲಿ ಮದುಮಗಳ ಕಡೆಯವರು ಹೊಸಮಡಿಕೆಗಳನ್ನು 'ಐರಾಣಿ' ಎಂದು ಕುಂಬಾರರ ಮನೆಯಿಂದ ತರಲೇಬೇಕು. ಕೆಲವು ಕಾಲದ ಹಿಂದೆ ಐರಾಣಿ

ತರುವಾಗ ಮುತ್ತೈದೆಯರು ತಮ್ಮ ಜೊತೆ ಮದುಮಗಳನ್ನು ಕರೆದೊಯ್ಯುತ್ತಿದ್ದರಂತೆ".[೧] ಆಗ ಕುಂಬಾರ ತನ್ನ ತಿಗುರಿಯ ಮೇಲೆ ಮದುಮಗಳನ್ನು ಕುಳ್ಳಿರಿಸಿ ಅದನ್ನು ಏಳು ಸುತ್ತು ತಿರುಗಿಸುತ್ತಿದ್ದ. ಆ ಬಳಿಕ ಕುಂಬಾರಗಿತ್ತಿ ಏಳು ಹೊಸ ಮಡಕೆಕುಡಿಕೆಗಳನ್ನು ಕೊಡುವಳು. ಎರಡು ಕುಡಿಕೆ ಐದು ಬಿಂದಿಗೆ – ಇವುಗಳಲ್ಲಿ ನೀರು ತುಂಬಿ ಪೂಜೆ ಮಾಡಿದಾಗ ಇವುಗಳಲ್ಲಿ ಏಳು ಸಮುದ್ರಗಳು ತುಂಬಿವೆ ಎನ್ನುವ ನಂಬಿಕೆ. ಅಕಸ್ಮಾತ್ ಯಾವುದಾದರೂ ಎರಡು ಪಾತ್ರೆ ಒಂದಕ್ಕೊಂದು ತಾಕಿದರೆ ಸೀಳಿದರೆ, ಗಂಡಹೆಂಡಿರು ತಮ್ಮ ಜೀವನದಲ್ಲಿ ಜಗಳವಾಡುವುದು ಖಾತ್ರಿ ಎಂದು ಭಾವನೆ. ಈ ಏಳು ಮಡಕೆ ಪ್ರತಿಯಾಗಿ ಮುತ್ತೈದೆಯರು ಕುಂಬಾರಗಿತ್ತಿಗೆ ಹೊಸ ಸೀರೆ ಕೊಡುವರು.

ಕುಂಬಾರರ ಸಾಮಾಜಿಕ ಸಂಸ್ಕೃತಿ ಅವರ ಉಡುಗೆ–ತೊಡುಗೆ ಒಂದು ರೀತಿ ವಿಶಿಷ್ಟತೆಯಿಂದ ಕೂಡಿರುತ್ತದೆ. ಇವರು ಸಾಮಾನ್ಯ ಜನರಿಗಿಂತ ವಿಶಿಷ್ಟತೆಯಿಂದ ಸರಳವಾಗಿದ್ದಾರೆ. ಗಂಡಸರು ಮತ್ತು ಹೆಂಗಸರ ಉಡುಪುಗಳು ಸಹ ಸರಳತೆಯಿಂದ ಇರುತ್ತದೆ. ಗಂಡಸರು ಅವರು ದೇವರ ಹೆಸರಿನಲ್ಲಿ 'ದಾಸಯ್ಯ' (ಗುಡ್ಡಪ್ಪ)ರೆಂದು ಅವರ ಎರಡು ಭುಜಕ್ಕೆ 'ಶಂಖಾಕಾರದ' ಮುದ್ರೆಯನ್ನು ಒತ್ತುತ್ತಾರೆ. ಇವರು ಹಣೆಯ ಮೇಲೆ ಮೂರು ನಾಮವನ್ನು ಧರಿಸುತ್ತಾರೆ. ಕೈಯಲ್ಲಿ ಜಾಗಟೆ, ಘಂಟೆ, ಶಂಖ, ಜೋಳುಗವನ್ನು ಧರಿಸಿ ಭಿಕ್ಷೆಗೆ ಹೋಗುತ್ತಾರೆ.

ಇವರು ತಲೆಗೆ ಕೆಂಪು ವಸ್ತ್ರದಿಂದ ಪೇಟವನ್ನು ಧರಿಸಿರುತ್ತಾರೆ. ಇನ್ನಿತರ ಜನರು ಅಂಗಿ ನಿಕ್ಕರ್, ಹೆಗಲ ಮೇಲೆ ಟವಲ್ಲು, ಇದ್ದು ಇವರು ಬಿಸಿಲಿನ ರಕ್ಷಣೆಗಾಗಿ ಹಾಗೂ ಮುಂಜಾನೆ ತಾವು ಬೇರೆ ಊರಿಗೆ ಮಡಕೆ ಮಾರಲು ಹೊರಟಾಗ ಚಳಿಯಿಂದ ರಕ್ಷಣೆ ಪಡೆಯಲು ಬಳಸಿಕೊಳ್ಳುತ್ತಾರೆ. ಮದುವೆಯ ಸಮಯದಲ್ಲಿ ಗಂಡು ತಲೆಗೆ ಒಂದು ರೇಷಿಮೆಯ ವಸ್ತ್ರವನ್ನು ಸಾಮಾನ್ಯವಾಗಿ ಸುತ್ತಿಕೊಳ್ಳುತ್ತಾರೆ. ಗಂಡು ತನ್ನ ಕೈಯಿಗೆ ಮುಂಗೈ, ಕಿವಿಗೆ, ಹೆಗಲಮೇಲೆ ರೇಷ್ಮೆ ರುಮಾಲು, ಕಾಲಿಗೆ ಮೆಟ್ಟು ಕೈಯಲ್ಲಿ ಶುದ್ಧ ಚಾಕು – ಹಣೆಗೆ ಬಾಸಿಂಗ ಇನ್ನೊಂದು ಕೈಯಲ್ಲಿ ತುರಾಯಿ, ಕೊರಳಲ್ಲಿ ಹೂವಿನಹಾರ, ಬೆರಳಿಗೆ ಉಂಗುರ ಇನ್ನಿತರ ವಸ್ತುಗಳನ್ನು ಧರಿಸುತ್ತಾರೆ. ಹಿಂದೆ ಕೆಲವು ಗಂಡಸರು (ಯಜಮಾನ) ಆ ಜನಾಂಗದಲ್ಲಿ ಹೆಣ್ಣುಮಕ್ಕಳಂತೆ, ತಲೆಕೂದಲನ್ನು ಬೆಳೆಸಿ ತುರುಬು ಕಟ್ಟಿ ಹೂವನ್ನು ಮುಡಿಯುತ್ತಿದ್ದನ್ನು ಹಿಂದಿನವರಲ್ಲಿ ಕಾಣುತ್ತಿದ್ದವು ಎಂದು ಅಧ್ಯಯನದಿಂದ ತಿಳಿದುಬಂದಿದೆ.

---

೧. Tribes and Cast of C.P. of India, P. 6, Vol. IV: R.V.Russel and Hiralal, 1975.

ಕುಂಬಾರರ ಜಾನಪದ ನಂಬಿಕೆಯಲ್ಲಿ ಇಲ್ಲಿನ ಹೆಂಗಸರು ಇತರ ಹೆಂಗಸರು ತೊಡುವುದಕ್ಕಿಂತ ಸ್ವಲ್ಪ ಭಿನ್ನವಾಗಿದೆ ಮತ್ತು ವಿಶಿಷ್ಟವಾಗಿದೆ. ಸಂಪ್ರದಾಯಸ್ಥ ಹೆಂಗಸರು ೧೬ ಮೊಳದ ಸೀರೆಯನ್ನು ಉಡುತ್ತಿದ್ದರು. ಕೆಲವು ವಯಸ್ಸಾದ ಮುದುಕಿಯರು ರವಿಕೆಯನ್ನು ತೊಡುತ್ತಿರಲಿಲ್ಲ. ಬರಿ, ಸೀರೆ ಮಾತ್ರ ಉಟ್ಟುಕೊಳ್ಳುತ್ತಿದ್ದರು. ಇನ್ನೂ ಕೆಲವು ಸ್ತ್ರೀಯರು ತಾಳಿ, ಕಾಲುಂಗುರ, ಬೆಂಡೋಲೆ, ಮೂಗುತಿ, ಕಿವಿ, ಚೈನು, ಸೊಂಟದ ಗೆಜ್ಜೆಪಟ್ಟಿ, ಕೈಬಂದಿ, ತೋಳಬಂದಿ, ಕೈಕಡಗ, ಬೆರಳಿನ ಉಂಗುರ, ಕಿವಿಗೆ ಬೆಂಡೋಲೆ, ಗುಡಿ ಮುಂತಾದವುಗಳನ್ನು ಉಪಯೋಗಿಸುವರು. ಆದರೆ ಆಧುನಿಕತೆಯ ಪ್ರಭಾವದಿಂದ ಇತ್ತೀಚಿನ ದಿನಗಳಲ್ಲಿ ಕೆಲವು ಮಹಿಳೆಯರು ಸೀರೆ, ಲಂಗ, ರವಿಕೆ, ತಾಳಿ, ಕಾಲುಂಗುರ, ಮೂಗುತಿ, ಕಾಲಂದಿಗೆ, ಕಾಲುಚೈನು ಮುಂತಾದವುಗಳನ್ನು ಉಪಯೋಗಿಸುವುದನ್ನು ನಾವು ಕಾಣುತ್ತೇವೆ.

ಸಾಮಾನ್ಯವಾಗಿ ಇಲ್ಲಿನ ಸ್ತ್ರೀಯರು ಕೈಗೆ, ಹಣೆಗೆ, ಕೆನ್ನೆಗೆ, ಮೊಣಕಾಲು ಮುಂತಾದ ಕಡೆ ಹಚ್ಚೆ (ಹಸಿರು)ಯನ್ನು ಹಾಕಿಸಿಕೊಳ್ಳುವ ಪದ್ಧತಿ ಇದೆ. ಇದನ್ನು ಈಗಲೂ ಕೆಲವು ಸ್ತ್ರೀಯರಲ್ಲಿ ಕಾಣಬಹುದು. ತಮ್ಮ ತಲೆಕೂದಲನ್ನು ಕೆಲವರು ಜಡೆ ಹೆಣೆದುಕೊಳ್ಳುತ್ತಾರೆ. ಮತ್ತೆ ಕೆಲವರು ತುರುಬು (ಗಂಟು) ಕಟ್ಟಿಕೊಳ್ಳುತ್ತಾರೆ. ತಲೆಗೆ ಹೆಳ್ಳೆಣ್ಣೆ (ಹರಳೆಣ್ಣೆ, ಕೈಯಣ್ಣೆ) ಹಚ್ಚುವರು. ಹಣೆಯ ಮೇಲೆ ಕೆಲವು ವಯಸ್ಸಾದ ಹೆಂಗಸರು ಅಗಲವಾದ ಕುಂಕುಮವನ್ನು ಧರಿಸುತ್ತಾರೆ. ಇತ್ತೀಚೆಗೆ ಸ್ತ್ರೀಯರಲ್ಲಿ ಬದಲಾವಣೆ ಆಗಿರುವುದನ್ನು ಕಾಣತ್ತೇವೆ. ಮದುವೆಯ ಸಂದರ್ಭದಲ್ಲಿ ಇವರ ಉಡುಗೆ-ತೊಡುಗೆಗಳು ಬೇರೆಯವರಿಗಿಂತ ವಿಭಿನ್ನವಾಗಿರುತ್ತದೆ. ಈ ಜಾತಿಯಲ್ಲಿ ಗಂಡ ಸತ್ತರೆ ಮುತ್ತೈದೆ ಲಕ್ಷಣದ ವಸ್ತುಗಳನ್ನು ಸಂಪೂರ್ಣವಾಗಿ ತೆಗೆದುಬಿಡುತ್ತಾರೆ. ಕಾರಣ ಇವರು ಹಿಂದೂ ಸಂಪ್ರದಾಯಕ್ಕೆ ಕಟ್ಟಿಬಿದ್ದಿರುವುದರಿಂದ ಮುತ್ತೈದೆತನವನ್ನು ಕಳೆದುಕೊಂಡ ಸ್ತ್ರೀಯು ಯಾವುದೇ ಶುಭಸಮಾರಂಭಗಳಲ್ಲಿ ಭಾಗವಹಿಸುವಂತಿಲ್ಲ. ಈಗಲೂ ಸಹ ಈ ಪದ್ಧತಿಯನ್ನೇ ಅನುಸರಿಸುತ್ತಾ ಬಂದಿದ್ದಾರೆ. ಇಂದಿನ ಪರಿಸ್ಥಿತಿಯ ಸಂದರ್ಭದಲ್ಲಿ ಓದುಬರಹ ಕಲಿತವರು ಉಡುಪುಗಳಲ್ಲಿ ಸ್ವಲ್ಪ ಬದಲಾವಣೆಯನ್ನು ಕಾಣಬಹುದು. ಆದರೆ ತಮ್ಮ ನಡೆ-ನುಡಿ, ಆಚಾರ-ವಿಚಾರದಲ್ಲಿ ಹಿಂದಿನವರು ಯಾವ ರೀತಿ ನಡೆದುಕೊಳ್ಳುತ್ತಿದ್ದರೋ ಅದನ್ನೇ ಮುಂದುವರೆಸಿಕೊಂಡು ಬಂದಿದ್ದಾರೆ.

ಸಮಾಜದ ನಿರ್ಲಕ್ಷ್ಯತೆಗೆ ಒಳಗಾದ ಕುಂಬಾರರು ಸಮಾಜದ ನಡುವೆ ಇದ್ದರೂ ಸಮಾಜಕ್ಕೆ ಅನ್ಯರಾಗಿ ಬದುಕುತ್ತಿದ್ದಾರೆ. ಕುಂಬಾರರನ್ನು ಕುರಿತು ಜನಪದದಲ್ಲಿ ಕೆಲವು

ಹಾಡುಗಳು ಸಮಾಜದ ಮೇಲಿನ ಸ್ತರದವರು ಅವರನ್ನು ಯಾವ ಕೀಳುದೃಷ್ಟಿಯಿಂದ ನೋಡುತ್ತಿದ್ದರು ಎನ್ನುವುದು ಸಾಕ್ಷಿಯಾಗಿದೆ.

"ಕುಂಬಾರ ನಿನಗ್ಯಾಕೊ ಗೊಂಬಿ ಮಾಟದ ಹೆಣ್ಣು
ತುಂಬೆಂದ ಮಣ್ಣ ತುಳಿಯೆಂದ। ಮನಿ ಮನಿಗೆ
ಹೊತ್ತು ಮಾರಂದ ಮಡಕೀಯಾ"[೧] ಎಂದು ಹೇಳಿದ್ದಾರೆ.

'ಕುಂಬಾರ ಕೂಟಲ್ಲ; ಕೂದಲ ಗೂಟಲ್ಲ' ಅನ್ನುವ ಗಾದೆ ಸಮಾಜದಲ್ಲಿ ವಿಶೇಷ ಗೌರವದಿಂದ ಸೇರಿಸಿಕೊಳ್ಳುತ್ತಿರಲಿಲ್ಲ ಎನ್ನುವುದನ್ನು ಸೂಚಿಸುತ್ತದೆ. ಇಷ್ಟಾದರೂ ಕುಂಬಾರ ಅನಾದಿಕಾಲದ ಶಿವನ ಮದುವೆಗೆ ಪಾತ್ರೆ-ಪಗಡೆ ಪೂರೈಸಿದ ಆದಿಮ ಕುಂಭಕಾರ, ಅನನ್ಯ ಭಕ್ತಿಯಿಂದ ಕಾಯಕ ಮಾಡಿ ಶಿವನನ್ನೇ ಕುಣಿಸಿದ ಶಿವಭಕ್ತ. ಒಕ್ಕಲುತನದ ಮುಖ್ಯವಾದ ನಮ್ಮ ಗ್ರಾಮೀಣ ಬದುಕಿನ ಅಗತ್ಯತೆಯನ್ನು ಪೂರೈಸುವ ಮಹತ್ವದ ವ್ಯಕ್ತಿ, ಜನಪದರ ಬದುಕಿನ ಎಲ್ಲಾ ಹಂತಗಳಲ್ಲೂ ತನ್ನ ಪಾಲಿನ ಸೇವೆಯನ್ನು ಸಲ್ಲಿಸುವ ಉದಾರಶೀಲ ಜಾಣ ಕುಂಬಾರ.

**ನಂಬಿಕೆ ಮತ್ತು ಸಂಪ್ರದಾಯಗಳು:**

ಪುರಾಣಗಳಿಂದ ಮತ್ತು ಐತಿಹ್ಯಗಳಿಂದ ಸಂಪ್ರದಾಯಗಳು ಪ್ರಭಾವಿತ-ವಾಗಿರುತ್ತದೆ. ಈ ಸಂಪ್ರದಾಯ ಜಾನಪದದ ಒಂದು ಮುಖ್ಯ ಪ್ರಕಾರ. ಒಂದು ಜನಸಮೂಹದ ಸಂಸ್ಕಾರ ವಿಶೇಷವಾದ ಭದ್ರಬುನಾದಿಯ ಮೇಲೆ ರೂಪುಗೊಂಡು ಪರಂಪರಾಗತವಾಗಿ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಆ ಸಮಾಜದಲ್ಲಿ ಮುಂದುವರೆಯುವ ವಿಶಿಷ್ಟ ಕ್ರಿಯಾ ವಿನ್ಯಾಸವನ್ನು ಸಂಪ್ರದಾಯ ಎಂದು ಕರೆಯಬಹುದು. ಸಂಪ್ರದಾಯ ಎನ್ನುವುದು ವೈಯಕ್ತಿಕವಾದುದಲ್ಲ ಸಾಮೂಹಿಕ-ವಾದದು. ಜನರು ಮಾಡುವುದು ಏನು ಎಂಬುದನ್ನು ತಿಳಿಸುವುದೇ ಸಂಪ್ರದಾಯ. ಅವನ್ನು ಏಕೆ ಮಾಡಬೇಕೆಂದು ಅವರು ತಿಳಿದಿದ್ದಾರೋ ಅದೇ ನಂಬಿಕೆ. ಅದನ್ನು ಹೇಗೆ ಮಾಡುತ್ತಾರೆಂಬುದನ್ನು ತಿಳಿಸುವುದೇ ವಿಧಿ (Ordeal) ಎಂದು ಕರೆಯಬಹುದು. ಉಪಾಸನೆ ಮತ್ತು ನಿಷಿದ್ಧ ಧಾರ್ಮಿಕ ಸಂಪ್ರದಾಯದ ವ್ಯಾಪ್ತಿಯಲ್ಲಿ ಈ ಸಂಪ್ರದಾಯ ಜನಿಸಿರಬಹುದು. ಸಂಪ್ರದಾಯವು ಮಾನವ ಜೀವನದ ಎಲ್ಲಾ ಕ್ಷೇತ್ರಗಳಲ್ಲೂ ವ್ಯಾಪಿಸಿಕೊಂಡಿದೆ. ಈ ಸಂಪ್ರದಾಯಗಳು ಕೇವಲ ಗೊಡ್ಡು ಕಂದಾಚಾರಗಳೆಲ್ಲ ಸಾಮಾಜಿಕ ಜೀವನದೊಡನೆ ಅವುಗಳ ಸಂಬಂಧ ನಿಕಟವಾದವುಗಳಾಗಿವೆ.

---

೧. ಜಾನಪದ ಸಾಹಿತ್ಯ ದರ್ಶನ - ೯, ಸಂಪಾದಕ: ಡಾ. ದೇವೇಂದ್ರಕುಮಾರ ಎಸ್.ಹಕಾರಿ, ಪುಟ ಸಂಖ್ಯೆ - ೨೧೦-೨೧೧.

ಪುರಾಣ ಮತ್ತು ಉಪಾಸನೆ ನಿಕಟವಾದ ಸಂಬಂಧವನ್ನು ಹೊಂದಿದ್ದು, ಪುರಾಣದ ವಿವಿಧ ಬಗೆಗಳಲ್ಲಿ ಉಪಾಸನೆಯ ಪುರಾಣ ಒಂದು ಬಗೆ. ಈ ಬಗೆಯ ಪುರಾಣ ಕಥೆ ಮಾತ್ರವಾಗಿರದೆ ಉಪಾಸನೆಯ ಸ್ವರೂಪ ಕುರಿತ ವಿವರಣೆಯೂ ಆಗಿರುತ್ತದೆ. ಉಪಾಸನೆ ನಿರ್ದಿಷ್ಟವಾದ ಕಾಲದಲ್ಲಿ ನಿರ್ದಿಷ್ಟ ಉದ್ದೇಶಕೋಸ್ಕರ ಮಾಡುವಂತಹದ್ದು. ಇದು ವ್ಯಕ್ತಿಯ ಮತ್ತು ಸಮಾಜದ ಒಳಿತಿಗಾಗಿ ಮಾಡುವಂತಹದು. ಇವರಲ್ಲಿ ಮನೆಯ ಹಿರಿಯ ಯಜಮಾನ ಊರಿನ ಗೌಡ, ಪೂಜಾರಿ ಪ್ರಮುಖ ಪಾತ್ರದಾರಿಯಾಗಿರುತ್ತಾರೆ. ಈ ಉಪಾಸನೆಯಲ್ಲಿ ಕ್ರಿಯೆ ಮಾತ್ರವಲ್ಲದೆ ಮಾತುಗಳಲ್ಲಿಯೂ ಇರುತ್ತದೆ. ಈ ಕುಂಬಾರರಲ್ಲಿ ಹುಟ್ಟು ಸಾವಿನ ನಡುವೆ ಬರುವ ಸೀಮಂತ, ಜನನ, ಮದುವೆ ಸಾವು ಈ ಸಂದರ್ಭಗಳಲ್ಲಿ ಅನುಸರಿಸುವ ಸಂಪ್ರದಾಯಗಳಲ್ಲಿ ಉಪಾಸನೆ ಪ್ರಧಾನ ಪಾತ್ರವಹಿಸುತ್ತದೆ. ಈ ಉಪಾಸನೆಗಳು ಆಚರಣೆಯಲ್ಲಿದ್ದವು ಎನ್ನುವುದಕ್ಕೆ ಈ ಕುಂಬಾರರ ಬಗ್ಗೆ ಪುರಾಣಗಳಲ್ಲಿ ಕೆಲವು ಮಾಹಿತಿ ಸಿಗುತ್ತವೆ.

ಜಾನಪದ ಅಧ್ಯಯನದಲ್ಲಿ ನಂಬಿಕೆಗಳಿಗೆ ಪ್ರಮುಖವಾದ ಸ್ಥಾನವಿದೆ. ಏಕೆಂದರೆ ನಂಬಿಕೆಗಳು ಮಾನವ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದೆ. ಮಾನವನ ಸಂಸ್ಕೃತಿಯ ಇತಿಹಾಸದ ಬೇರುಗಳೇ ಈ ನಂಬಿಕೆಗಳು. ಈ ನಂಬಿಕೆ ಮತ್ತು ಸಂಪ್ರದಾಯಗಳು ಮಾನವನ ನಡವಳಿಕೆಯನ್ನು ಪ್ರತಿಬಿಂಬಿಸುತ್ತವೆ. ಇವುಗಳ ವ್ಯಾಪ್ತಿ ಗ್ರಾಮೀಣ ಜನರಿಗೆ ಮಾತ್ರ ಸೀಮಿತವಾಗಿರದೇ ನಾಗರಿಕ ಬದುಕನ್ನು ಒಳಗೊಂಡಿದೆ. ಆದರೆ ಈ ನಂಬಿಕೆಗಳು ನಾಗರಿಕ ಗ್ರಾಮೀಣರಲ್ಲಿ ಹೆಚ್ಚು ಕಂಡುಬರುತ್ತದೆ. ಹೀಗೆ ಕುಂಬಾರರು ತಮ್ಮದೇ ಆದ ಕೆಲವು ನಂಬಿಕೆ, ಸಂಪ್ರದಾಯಗಳು ಈ ಜಾನಪದ ಸಂಸ್ಕೃತಿಯಲ್ಲಿ ತನ್ನದೇ ಆದ ಕೆಲವು ವಿಶಿಷ್ಟತೆಗಳನ್ನು ಅಧ್ಯಯನದಲ್ಲಿ ಕಾಣಬಹುದಾಗಿದೆ.

ಚಿಕ್ಕಮಕ್ಕಳಿಗೆ ಮಾರಮ್ಮನ ಕ್ರೂರ ದೃಷ್ಟಿ ಬಿದ್ದು ದಡಾರ, ಸಿಡುಬು, ಬಂದಾಗ ಆ ಊರಿನ ಗ್ರಾಮದೇವತೆಗೆ ಹರಕೆಯನ್ನು ಕಟ್ಟಿಕೊಂಡು ಪೂಜೆಸಲ್ಲಿಸಿ ಮನೆಯ ಒಳಗಡೆ ಯಾವುದೇ ವಿಧವಾದ ಹೊಲಸು ಆಗದಂತೆ ನೋಡಿಕೊಳ್ಳುವರು. ಅಂತಹ ಸಮಯದಲ್ಲಿ ಮೀನು, ಮಾಂಸ ಮೊದಲಾದ ಅಡಿಗೆಯನ್ನು ಮಾಡುವುದನ್ನು ನಿಷೇಧಿಸುವರು. ಹಾಗೆಯೇ ಒಲೆಯ ಮೇಲೆ ಹೆಂಚು (ತವೆ) ಇಡುವುದಿಲ್ಲ. ಇಂತಹ ಸಂದರ್ಭದಲ್ಲಿ ಮಾರಮ್ಮನಿಗೆ ಕುರಿ, ಕೋಳಿ ಮೊದಲಾದ ಪ್ರಾಣಿಗಳನ್ನು ಹರಕೆಯಾಗಿ ಒಪ್ಪಿಕೊಂಡು ತಮ್ಮ ಕಷ್ಟವನ್ನು ನಿವಾರಿಸಿಕೊಳ್ಳುತ್ತಾರೆ. ಹಾಗೆಯೇ ಪ್ರತಿ ಮಂಗಳವಾರದಂದು ಮಾರಮ್ಮನ ಪೂಜಾರಿಯ ಮನೆಗೆ ಅಕ್ಕಿ, ಹಾಲು, ಎಳನೀರು,

ದುಡ್ಡು ಅಮ್ಮನಿಗೆ ಹಾಲು ಅನ್ನದ ನೈವೇದ್ಯ ಮಾಡಿಸುತ್ತಾರೆ. ಆಗ ಬಂದಿರುವ ದಡಾರ, ಸಿಡುಬು, ಸ್ವಲ್ಪ ಸ್ವಲ್ಪ ಕಡಿಮೆಯಾಗುತ್ತಾ ಹೋಗುತ್ತದೆ.

ಕುಂಬಾರರ ಕಸುಬಿಗೆ ಮಣ್ಣು ತರುವ ಕೆರೆ ಅಥವಾ ಕಟ್ಟೆಯ ಏರಿಯ ಮೇಲೆ ಲಕ್ಕಮ್ಮ, ಕಾಳಮ್ಮನ ಗುಡಿಯಿದ್ದರೆ ಅಂಥ ಮಣ್ಣನ್ನು ಬಹಿಷ್ಕೆಯಾದವರಿಂದ ಮುಟ್ಟಿಸುವುದಿಲ್ಲ. ಯುಗಾದಿ ಆದನಂತರ ಬರುವ ಹುಣ್ಣಿಮೆಯ ದಿನ ಮಹೇಶ್ವರಮ್ಮನನ್ನು (ಕೊಂಡಾರ್‍ಯರು) ಮಾಡುತ್ತಾರೆ. ಹೊಸ ಗಡಿಗೆಯಲ್ಲಿ ಆಗ ತಾನೆ ಇಳಿಸಿದ ಸೇಂದಿ ತಂದು ಅದರ ಬದಿಗೆ ಇನ್ನೊಂದು ಗಡಿಗೆಯಲ್ಲಿ ಬೆಲ್ಲದ ಪಾನಕ ಇಡಬೇಕು. ಅದಕ್ಕೆ ಬೇವಿನ ಸೊಪ್ಪು ಮುಡಿಸಿ, ಅಂಗದಾರ ಕಟ್ಟಬೇಕು. ಸೇಂದಿ ಇದ್ದ ಗಡಿಗೆಗೆ ಬಿಳಿಬಟ್ಟೆ ಹೊದಿಸಬೇಕು. ಎರಡು ಗಡಿಗೆಗಳ ಮುಂದೆ ಒಂದೊಂದು ಅಂದರೆ ಎರಡು ಪಿಳ್ಳೇರಾಯಗಳನಿಟ್ಟು, ಅವುಗಳ ಮುಖ ಉತ್ತರವಾಗಿರುವಂತೆ ಇಟ್ಟು ಅದಕ್ಕೆ ಆರತಿ ಮಾಡುತ್ತಾರೆ. ಆಗ ಒಂದು ಕೋಳಿಯನ್ನು ಬಲಿಗೊಟ್ಟು ಅದರ ರಕ್ತವನ್ನು ಸೇಂದಿಗೆ ಬೆರಸುತ್ತಾರೆ. ಬೆಲ್ಲದ ಪಾನಕಕ್ಕೆ ಬೆರಸುವುದಿಲ್ಲ. ಅವನ್ನು ಒಂದು ರಾತ್ರಿ ಹಾಗೆ ಮನೆಯಲ್ಲಿರಿಸುತ್ತಾರೆ. ಆ ಗಡಿಗೆಗಳ ಕೆಳಗೆ ನಲ್ಲು, ರಾಗಿ, ಅಕ್ಕಿಯನ್ನು ಹಾಸುವರು. ಬಲಿಮಾಂಸದ ಅಡಿಗೆ ಮಾಡಿದ ನಂತರ ಅದನ್ನು ಘಟಗಳ ಮುಂದೆ ಎಡೆ ಹಾಕುವರು. ಅದರೊಂದಿಗೆ ರಾಗಿ ಇಲ್ಲವೇ ಅಕ್ಕಿಯ ಐದು ದೋಸೆಗಳನ್ನು ಕುಂಭಗಳ ಮುಂದಿರಿಸಿ ಪೂಜಿಸಿ ನಂತರ ಎಲ್ಲರೂ ಕೂತು ಊಟ ಮಾಡುತ್ತಿದ್ದರು. ಹಿಂದಿನ ಕಾಲದಲ್ಲಿ ಎಂತಹ ಕಾಯಿಲೆ ಬಂದರೂ ಆಸ್ಪತ್ರೆಗೆ ಹೋಗದೆ ದೇವರಿಗೆ ಹರಕೆ ಕಟ್ಟಿಕೊಳ್ಳುವುದರ ಮೂಲಕ ಪರಿಹರಿಸಿಕೊಳ್ಳುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಈ ಜನರಲ್ಲಿ ತಿಳುವಳಿಕೆ ಮೂಡಿದ್ದು, ಇಂತಹ ಕಾಯಿಲೆಗಳು ಬಂದರೆ ಆಸ್ಪತ್ರೆಗೆ ಹೋಗುತ್ತಾರೆ. ಜೊತೆಗೆ ಈ ಪೂಜೆಯನ್ನು ಮಾಡಿಸುತ್ತಾರೆ. ಇದರಿಂದ ತಿಳಿದು ಬರುವ ಮುಖ್ಯ ಸಂಗತಿಯೆಂದರೆ ಜನರು ಎಷ್ಟೇ ವೈಜ್ಞಾನಿಕವಾಗಿ ಮುಂದುವರೆದಿದ್ದರೂ ಸಹ ಹಿಂದಿನಿಂದಲೂ ಬಂದಂತಹ ನಂಬಿಕೆಯ ಒಂದು ತುಣುಕು ಎಲ್ಲೋ ಇದ್ದು, ನಂಬಿಕೆಗಳನ್ನು ಹೆಚ್ಚಿಲ್ಲದಿದ್ದರೂ ಸ್ವಲ್ಪಮಟ್ಟಿಗಾದರೂ ಆಚರಿಸಿಕೊಂಡು ಬರುತ್ತಿರು-ವವರನ್ನು ಇಂದಿಗೂ ಕಾಣಬಹುದಾಗಿದೆ.

**ಹಬ್ಬಗಳು:**

ಹಬ್ಬಗಳು ಸಂಸ್ಕೃತಿಯ ಸಂವಹನದ ಮಾಧ್ಯಮಗಳು. ವರ್ಷದ ನಿರ್ದಿಷ್ಟ ದಿನಗಳಲ್ಲಿ ಆಚರಿಸುವ ಸಂತಸದ ಕ್ಷಣಗಳು. ಸಂಸ್ಕೃತಿಯ ಸಂಘಟನೆಯ ಸಾಮಾಜಿಕ ಮೌಲ್ಯಗಳ ಪೋಷಕಗಳು ಮಾನವನಿಗೆ ದೇವರ ಕಲ್ಪನೆ ಬಂದಾಗಿನಿಂದಲೂ ಅವನ್ನು

ಆರಾಧಿಸುವ ಒಂದಲ್ಲ ಒಂದು ರೀತಿಯ ಆಚರಣೆಗಳನ್ನು ವ್ಯವಸ್ಥಿತವಾಗಿ ರಚಿಸಿಕೊಳ್ಳುತ್ತಲೇ ಬಂದಿದ್ದಾನೆ. ಇಂತಹ ಆಚರಣೆಗಳಲ್ಲಿ ಹಬ್ಬಗಳು ಪ್ರಮುಖಸ್ಥಾನ, ಪಡೆದಿದ್ದು ಇಂದಿಗೂ ಸಾಂಸ್ಕೃತಿಕ ಮಹತ್ವವನ್ನು ದೃಢವಾಗಿ ನಿರೂಪಿಸುತ್ತವೆ. ಯಾವುದೇ ಮನುಷ್ಯ ಸಂತಸದಿಂದ ಜೀವಿಸಬೇಕಾದರೆ ಇಂತಹ ಹಬ್ಬ, ಜಾತ್ರೆ, ಉತ್ಸವಗಳು, ಅತ್ಯಾವಶ್ಯಕ, ಹಬ್ಬಗಳು ಒಂದು ವಿಧಿವಿಧಾನಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಬದಲಾವಣೆ ಹೊಂದುತ್ತಾ ಬಂದಿವೆ. ಆದರೆ ಅವುಗಳ ಉದ್ದೇಶ ಮಾತ್ರ ಒಂದೇ ಆಗಿರುತ್ತದೆ. ಹಬ್ಬದ ದಿನಗಳಲ್ಲಿ ಮನೆಗಳನ್ನು ಸ್ವಚ್ಛಗೊಳಿಸುವುದರ ಮೂಲಕ ಮಾನವ ತನ್ನ ಪರಿಸರದ ಶುದ್ಧತೆಗೆ ಗಮನಹರಿಸುತ್ತಾನೆ.

ಕುಂಬಾರರು ಆಚರಿಸುವ ಮುಖ್ಯ ಹಬ್ಬಗಳು ಮೂರು. ಒಂದು ಜೇಷ್ಠ ಬಹುಳದ ಮಣ್ಣೆತ್ತಿನ ಅಮಾವಾಸ್ಯೆ; ಎರಡು ದಸರೆ; ಮೂರು ಗೌರೀಹುಣ್ಣಿಮೆಯ ಸಂದರ್ಭದ ಗೌರೀಹಬ್ಬ, ಜನಪ್ರಿಯವಾದ ಮಣ್ಣೆತ್ತಿನ ಅಮಾವಾಸ್ಯೆಯೆಂದು ಒಕ್ಕಲಿಗರ ಮನೆಗಳಿಗೆ ಮಣ್ಣಿನ ಎತ್ತುಗಳನ್ನು ಕುಂಬಾರರು ಮಾಡಿಕೊಳ್ಳುತ್ತಿದ್ದರು. ಅದಕ್ಕಾಗಿ ಕುಂಬಾರಗಿತ್ತಿಯರಿಗೆ ಒಕ್ಕಲುಗಿತ್ತಿಯರಿಂದ ವಿಶೇಷ ಕಾಣಿಕೆ ಸಲ್ಲುತ್ತಿತ್ತು. ಅದರಂತೆ ಸೀಗೆ ಹುಣ್ಣಿಮೆಗೆ ಸೀಗವ್ವ, ಗೌರಿಹಬ್ಬದಲ್ಲಿ ಗೌರವ್ವ, ಗುಳಕವ್ವ, ಜೋಕುಮಾರ ಹೀಗೆ ಆನೇಕ ಬಗೆಯ ಮಣ್ಣಿನ ಮೂರ್ತಿಗಳನ್ನು ಕುಂಬಾರರು ಸಿದ್ದಮಾಡುತ್ತಿದ್ದರು. ಕಿನ್ನಾಳು ಇಂದಿಗೂ ಇಂಥ ಕಲೆಯ ಕೇಂದ್ರವಾಗಿದ್ದು ಮೂಲ ಕುಂಬಾರಿಕೆಯೇ ಇಂಥ ಕಲೆಗೆ ಪ್ರೇರಕ ಎನ್ನುವುದನ್ನು ಮರೆಯುವಂತಿಲ್ಲ. ಕನ್ನೂರಿನ ಗಣಪತಿ ಇಂದಿಗೂ ಪ್ರಸಿದ್ಧ[೧]. ಇಂದಿಗೂ ಮೈಸೂರು ಪ್ರಾಂತ್ಯದಲ್ಲಿ ಕುಂಬಾರರು ಗೌರಿ–ಗಣೇಶ ಹಬ್ಬಕ್ಕೆ ಗಣಪತಿ ವಿಗ್ರಹವನ್ನು ಮಾಡುವುದನ್ನು ಕಾಣುತ್ತೇವೆ.

ಕುಂಬಾರರ ಮೂಲ ನಡವಳಿಕೆ ಮತಾಚರಣೆಗಳ ಬಗೆಗೆ ಅಧಿಕೃತ ದಾಖಲೆಗಳ ಅಭಾವವಿರುವ ಈ ಕಾಲದಲ್ಲಿ ಡಾ. ಕಲ್ಬುರ್ಗಿಯವರು ಮದ್ರಾಸಿನ ಮೆಕಂಜಿ ಸಂಗ್ರಹಾಲಯದಿಂದ ಕುಂಬಾರರ ಜನಪದ ಒಂದು ಕೈಫಿಯತ್ತು ಸಂಗ್ರಹಿಸಿ ದೊರಕಿಸಿದ್ದಾರೆ.[೨] ಇದರಲ್ಲಿ ಕುಡಿಕುಂಬಾರ ಜಾತಿಯ ಹುಟ್ಟು ಮದುವೆ, ಸಾವುಗಳ ಹಿನ್ನೆಲೆಯ ಆಚರಣೆದ ಕುಲಾಚಾರ ಪದ್ಧತಿಗಳ ವಿವರವಿದೆ.

---

೧. ಈ ಮೂರ್ತಿಗಳ ರಚನೆಯಲ್ಲಿ ಪತ್ತಾರರು ಇಂದು ಮುಂದಿದ್ದಾರೆ. ಆದರೆ ಕುಂಭಕಲೆಯೇ ಇದರ ಮೂಲವಾಗಿರುವ ಸಾಧ್ಯತೆ ಇದ್ದೇ ಇದೆ.

೨. ಅದೇ.,

**ಚಾಂದ್ರಮಾನ ಯುಗಾದಿ:** ನಮ್ಮ ಹಿಂದೂಗಳ ಪವಿತ್ರವಾದ ಹಬ್ಬ ಈ ಹಬ್ಬವನ್ನು ಚೈತ್ರಮಾಸದ ಶುದ್ಧ ಸಪ್ತಮಿಯ ದಿನವೇ ಆಚರಿಸುವರು. ಇದು ವರ್ಷದ ಮೊದಲ ಹಬ್ಬವಾಗಿರುವುದರಿಂದ 'ಯುಗಾದಿ' ಎಂಬ ಹೆಸರು ಬಂದಿರಬಹುದು. ಇದು ಪಂಚಾಂಗದ ಪ್ರಕಾರ ಹೊಸ ವರ್ಷದ ಹೊಸದಿನವಾದ್ದರಿಂದ ಹಿಂದೂಗಳೆಲ್ಲ ಭಾವನಾತ್ಮಕ ಉತ್ಸಾಹವನ್ನು ತಂದುಕೊಡುತ್ತದೆ. ಕುಂಬಾರರು ಮೂರು ದಿನಗಳವರೆಗೆ ಈ ಹಬ್ಬವನ್ನು ಆಚರಿಸುತ್ತಾರೆ. ಗಂಡುಮಕ್ಕಳು ಹರಳೆಣ್ಣೆಯನ್ನು ತಮ್ಮ ಮೈಗೆಲ್ಲಾ ಹಚ್ಚಿಕೊಂಡು ಎಣ್ಣೆಸ್ನಾನವನ್ನು ಮಾಡಿ ಹೊಸಬಟ್ಟೆಯನ್ನು ಧರಿಸುತ್ತಾರೆ. ನಂತರ ಮನೆಯ ಬಾಗಿಲಿಗೆ ಮಾವಿನ ತೋರಣ ಮತ್ತು ಬೇವಿನ ಎಸಳನ್ನು ಸಿಕ್ಕಿಸಿ ಬೇವು ಬೆಲ್ಲವನ್ನು ತಿನ್ನುತ್ತಾರೆ. ಕುಂಬಾರರು ತಾವು ಮಾಡುವ ಕಸುಬಿನ ತಿಗರಿ ಮುಂತಾದ ಪದಾರ್ಥಗಳಿಗೆಲ್ಲ ಪೂಜೆಯನ್ನು ಸಲ್ಲಿಸುತ್ತಾರೆ. ಅವರವರ ಗ್ರಾಮದಲ್ಲಿ 'ಹೊನ್ನೇರ'ನ್ನು ಕಟ್ಟುತ್ತಾರೆ. ಆ ದಿವಸ ರಾತ್ರಿ ಚಂದ್ರನನ್ನು ಕಂಡರೆ ಪುಣ್ಯಬರುತ್ತದೆ ಎಂಬ ನಂಬಿಕೆಯೂ ಇದೆ.

**ಆಯುಧ ಪೂಜೆ:** ಆಯುಧ ಪೂಜೆಯನ್ನು ದಿನ ಬಳಕೆಯ ವಸ್ತುವನ್ನು ಅಂದರೆ ಎಲ್ಲಾ ಆಯುಧಗಳನ್ನು ಶುಚಿಗೊಳಿಸುವುದರ ಮೂಲಕ ಆಚರಿಸುತ್ತಾರೆ. ಇವರ ಕಸುಬು ಕುಂಬಾರಿಕೆಯಾದ್ದರಿಂದ ಈ ವೃತ್ತಿಗೆ ಬಳಸುವ ಎಲ್ಲಾ ರೀತಿಯ ಆಯುಧಗಳನ್ನು ಮತ್ತು ಕೃಷಿ ಸಂಬಂಧಿಸಿದ ಆಯುಧಗಳನ್ನು ಗಂಧ, ಅರಿಸಿಣ, ಕುಂಕುಮ, ವಿಭೂತಿ ಮೊದಲಾದವುಗಳಿಂದ, ಚೆಂಡುಹೂ, ಸೇವಂತಿಗೆ, ಮಲ್ಲಿಗೆ ಕನಕಾಂಬರ ಮುಂತಾದ ಹೂಗಳಿಂದ ಪೂಜಿಸುತ್ತಾರೆ. ಪ್ರಾಣಿಗಳನ್ನು ಬಲಿಕೊಡುತ್ತಾರೆ.

**ಶಿವರಾತ್ರಿ:** ಈ ಹಬ್ಬವನ್ನು ಕುಂಬಾರರು ಬಹಳ ಸೊಗಸಾಗಿ ಆಚರಿಸುತ್ತಾರೆ. ಹಬ್ಬದ ರಾತ್ರಿ ಸಮಯ ಮಾಡದೆ ಕೇವಲ ಹಣ್ಣು-ಹಂಪಲಗಳನ್ನು ಸೇವಿಸಿ ಇಡೀ ರಾತ್ರಿ ಶಿವನ ಭಜನೆಯ ಹಾಡುಗಳನ್ನು ಹಾಡುತ್ತ ರಾತ್ರಿ ಕಳೆಯುತ್ತಾರೆ. ಈ ಕುಂಬಾರರಿಗೆ ಕುಂಬಾರೇಶ್ವರನೇ ಶಿವ ಎಂಬ ನಂಬಿಕೆ. ಇದು ತಮ್ಮ ಮನೆದೇವರುಗಳ ನಾಮಸ್ಮರಣೆಯನ್ನು ಮಾಡುತ್ತಾ ಉಪವಾಸವಿರುವ ರಾತ್ರಿ. ಈ ಉಪವಾಸಕ್ಕೆಂದು ತಂಬಿಟ್ಟು, ರವೆ ಉಪ್ಪಿಟ್ಟು, ಫಲಹಾರವನ್ನು ಮಾಡುತ್ತಾರೆ. ಈ ಹಬ್ಬಕ್ಕೂ ಕುಂಬಾರರಿಗೂ ಒಂದು ನಿಕಟವಾದ ಸಂಬಂಧವನ್ನು ಅಧ್ಯಯನದಲ್ಲಿ ತಿಳಿಯಬಹುದು.

ಗೌರಿಹಬ್ಬವನ್ನು ಕುಂಬಾರರು ಅವರು ತಮ್ಮದೇ ಆದ ವಿಶಿಷ್ಟ ರೀತಿಯಿಂದ ಆಚರಿಸುತ್ತಾರೆ. ಈ ಹಬ್ಬದಲ್ಲಿ ಹೆಣ್ಣುಮಕ್ಕಳನ್ನು ಗಂಡನ ಮನೆಯಿಂದ ಕರೆಯುವುದು. ಅವರಿಗೆ ಆಭರಣಗಳು, ವಸ್ತುಗಳು, ಅರಿಶಿಣ, ಕುಂಕುಮ, ಹೂವುಗಳನ್ನು ಕೊಟ್ಟು

ಗೌರಿಪೂಜೆಯನ್ನು ಮಾಡುತ್ತಾರೆ. ಮಾರನೆಯ ದಿವಸ ಗಣೇಶನ ವಿಗ್ರಹವನ್ನು ಅವರವರ ಮನೆಯಲ್ಲಿ ಪೂಜಿಸುತ್ತಾರೆ. ಅಥವಾ ಅವರು ಕಸುಬು ಮಾಡುವ ಸ್ಥಳದಲ್ಲಿ ಪೂಜಿಸುತ್ತಾರೆ. ಇದೇ ದಿವಸ ಕೆಲವು ಮನೆತನದವರು (ಕುಂಬಾರರು) ಸತ್ತ ಹಿರಿಯರಿಗೆ ಮುಕ್ತಿ ಪ್ರಾಪ್ತಿಗಾಗಿ ತರ್ಪಣವನ್ನು ನೀಡಲಾಗುವುದಾಗಿದೆ. ಇನ್ನೂ ಕೆಲವು ಕುಂಬಾರರಲ್ಲಿ ಪಿತೃಪಕ್ಷ ಹಬ್ಬವೆಂದು ಮಾಡಿ ಅವರ ಮನೆಯಲ್ಲಿ ಮಾಡಿದ ಅಡಿಗೆಯನ್ನು ಬಾಳೆ ಎಲೆಯ ಮೇಲೆ ಎಡೆಯನ್ನು ಹಾಕಿ ಸತ್ತ ವ್ಯಕ್ತಿ ಗಂಡಸಾಗಿದ್ದರೆ, ಅವರಿಗೆ ಪಂಚೆ, ಅಂಗಿ, ಟವಲ್ಲನ್ನು, ಹೆಂಗಸಾಗಿದ್ದರೆ ಸೀರೆ, ರವಿಕೆಕಣ ಮತ್ತು ಅವರು ಉಪಯೋಗಿಸುತ್ತಿದ್ದ ತಿಂಡಿತಿನಿಸುಗಳು, ಮಾಂಸದ ಅಡುಗೆ ಎಲ್ಲವನ್ನು ಇಟ್ಟು ಪೂಜಿಸುತ್ತಾರೆ. ಇಂತಹ ಪಿತೃಪಕ್ಷ ಹಬ್ಬವಾಗಲಿ ಅಥವಾ ಇನ್ನಿತರ ಹಬ್ಬವಾಗಲಿ ಆಚರಿಸಿದಾಗ ಹಿರಿಯರಿಗೆ ಸದ್ಗತಿ ದೊರೆಯಲಿ ಎಂಬ ನಂಬಿಕೆಯಿಂದ ಆಚರಿಸುತ್ತಾರೆ.

**ಆಚರಣೆಗಳು:**

ಮನುಷ್ಯನ ಜೀವನದಲ್ಲಿ ಹುಟ್ಟಿನಿಂದ ಹಿಡಿದು ಸಾವಿನವರೆಗೂ ಇರುವ ವಿಧಿವಿಧಾನಗಳು ಪ್ರಮುಖವಾದವು. ಕರ್ನಾಟಕ ಬುಡಕಟ್ಟುಗಳಲ್ಲಿ ಜನನ ಸಂಸ್ಕಾರಗಳು ಸ್ತ್ರೀಗರ್ಭಿಣಿಯಾದ ದಿನದಿಂದಲೇ ಪ್ರಾರಂಭವಾಗುತ್ತವೆ. ಅಂದಿನಿಂದಲೇ ಅನೇಕ ಆಚರಣೆಗಳು ನಡೆಯುತ್ತವೆ. ಎಲ್ಲಾ ಬುಡಕಟ್ಟು ಮತ್ತು ಜಾತಿಗಳಲ್ಲಿ ಸೂತಕ, ಮುಟ್ಟು ಮತ್ತು ಮೈಲಿಗೆಯನ್ನು ಅತ್ಯಂತ ಕಟ್ಟುನಿಟ್ಟಿನಿಂದ ಪಾಲಿಸುತ್ತಾರೆ. ಹೆರಿಗೆ ಸಂದರ್ಭದಲ್ಲಿ ಆಚರಿಸುವ ಮೈಲಿಗೆ ಮಾನವನ ಹುಟ್ಟಿಗೆ ಸಂಬಂಧಿಸಿದ ಮೊದಲು ಮೈಲಿಗೆ, ಹೆರಿಗೆ, ಋತುಮತಿ, ತಿಂಗಳು ಮುಟ್ಟಿನ ಸಂದರ್ಭದಲ್ಲಿ ಆಚರಿಸುವ ಸೂತಕವನ್ನು ಮೈಲಿಗೆ ಎಂದು ಕರೆಯುವುದು ಹೆಚ್ಚು ಸೂಕ್ತ ಎನಿಸುತ್ತದೆ. ಸತ್ತ ದಿನದಿಂದ ದಿನಕರ್ಮಗಳು ಮುಗಿಯುವರೆವಿಗೂ ಇರುವ ಅವಧಿಯನ್ನು ಮಾತ್ರ ಸೂತಕದ ಕಾಲ ಎಂದು ಕರೆಯಬಹುದು. ಮಗು ಜನಿಸುವುದು, ಹೆಣ್ಣು ಋತುಮತಿಯಾಗುವುದು ಎಲ್ಲಾ ಸಮುದಾಯಕ್ಕೂ ಸಂತೋಷದ ವಿಷಯವೇ ಆಗಿರುತ್ತದೆ. ಶೋಕದ ಸಂಕೇತವಾಗಿ ಆಚರಿಸುವುದೇ ಸೂತಕ ಎಂದು ತಿಳಿಯಬಹುದು. ಹುಟ್ಟು, ಋತುಮತಿ, ತಿಂಗಳಮುಟ್ಟು ಇವು ಸಾಂಸ್ಕೃತಿಕ ಮೈಲಿಗೆಗಳು. ಈ ಮೈಲಿಗೆಗಳು ಹೆಚ್ಚಾಗಿ ಪುರೋಹಿತಶಾಹಿ ವರ್ಗದ ಸಮುದಾಯಗಳಲ್ಲಿ ಕಾಣುತ್ತೇವೆ. ಈ ವಿಷಯಗಳಲ್ಲಿ ಕುಂಬಾರರ ಪೂರ್ವಿಕರು ಅನುಸರಿಸುತ್ತಿದ್ದ ಪದ್ಧತಿಯನ್ನು ಚಾಚೂತಪ್ಪದೇ ಅನುಸರಿಸುತ್ತಿರುವುದನ್ನು ಅಧ್ಯಯನದಿಂದ ತಿಳಿದುಬರುತ್ತದೆ. ಕುಂಬಾರರಲ್ಲಿ ಸೀಮಂತಕಾರ್ಯ, ಜನನ, ಋತುಮತಿಯಾದಾಗ, ಮದುವೆಯಾದಾಗ, ಮರಣ

ಹೊಂದಿದಾಗ ಹೀಗೆ ಹಲವು ಆಚರಣೆಗಳನ್ನು ಬೇರೆ ಜನಸಮುದಾಯದವರಿಗಿಂತ ವಿಭಿನ್ನವಾದ ರೀತಿಯಲ್ಲಿ ಕಾಣುತ್ತೇವೆ.

**ಜನನ ಸಂಪ್ರದಾಯಗಳು:**

ಸಾಮಾನ್ಯವಾಗಿ ಕುಂಬಾರರಲ್ಲಿ ಒಬ್ಬ ಸ್ತ್ರೀ ಮಗುವೊಂದಕ್ಕೆ ಜನ್ಮ ಕೊಟ್ಟಾಗ ಅವರು ಆಚರಿಸುವಂತಹ ಪದ್ಧತಿಗಳು ಇತರ ಜನಾಂಗದ ಸಮುದಾಯಕ್ಕಿಂತ ಭಿನ್ನವಾಗಿರುತ್ತದೆ. ಕುಂಬಾರರ ಹೆಂಗಸರ ಚೊಚ್ಚಲ ಹೆರಿಗೆ ತವರಿನಲ್ಲೇ ನಡೆಯುತ್ತದೆ. ಬಸುರಿಗೆ ಐದು ತಿಂಗಳು ತುಂಬಿದಾಗ ಮಾಡಿಕ್ಕುವುದು (ಬಸುರೂಟ, ಮಡಿಲು ತುಂಬುವುದು) ಅಂದರೆ ವಿಶೇಷವಾದ ಅಡುಗೆಯನ್ನು ತವರವರು ಗಂಡನ ಮನೆಯವರು ಮತ್ತು ಬಂಧುಗಳೊಂದಿಗೆ ಸಿಹಿಊಟವನ್ನು ಹಂಚಿಕೊಳ್ಳುವರು. ಮನೆಯ ಹಿರಿಯರ ಗಂಡನ ಅನುಮತಿ ಪಡೆದು ತವರಿಗೆ ಬಸುರಿಯನ್ನು ಕರೆದುಕೊಂಡು ಬರುವರು. ಗರ್ಭಿಣಿಯಾದ ಮಗಳಿಗೆ 'ಬಸುರು-ಬಯಕೆ' ಗಳೇನಾದರೂ ಇದ್ದರೆ ಕೇಳಿ ಅದನ್ನು ಪೂರೈಸುತ್ತಾರೆ. 'ಹುಳಿಮಾವಿನಕಾಯಿ' ತಿನ್ನುವುದು 'ಕೆಮ್ಮಣ್ಣು ತಿನ್ನುವುದು', ಒಡವೆಗಳನ್ನು ತೊಡಬೇಕೆಂಬ ಬಯಕೆ, ಸಾಮಾನ್ಯವಾಗಿ ಕಾಣುತ್ತೇವೆ. ಈ ಬಯಕೆಗಳು ಈಡೇರದಿದ್ದಲ್ಲಿ ಸಕಾಲದಲ್ಲಿ ಹೆರಿಗೆಯಾಗುವುದಿಲ್ಲ ಎಂಬ ನಂಬಿಕೆ ಹಾಗೂ ಕೆಲವೊಮ್ಮೆ ಎದೆಹಾಲು ಬೀಳುವುದಿಲ್ಲ ಎಂಬ ನಂಬಿಕೆಗಳಿವೆ. ಹಾಗೆಯೇ ಗ್ರಹಣದ ದಿವಸ ಕಿರಣಗಳು ಗರ್ಭಿಣಿಯ ಮೈಮೇಲೆ ಬಿದ್ದರೆ ಹುಟ್ಟುವ ಮಗು ಅಂಗವಿಕಲವಾಗುತ್ತದೆಂದು ನಂಬಿರುವ ಈ ಜನಾಂಗದಲ್ಲಿ ಗರ್ಭೀಣಿಯರನ್ನು ಗ್ರಹಣದ ದಿನ ಹೊರಗೆ ಕಳುಸಿಸದಂತೆ ಎಚ್ಚರ ವಹಿಸುತ್ತಾರೆ. ಹೆರಿಗೆ ದಿನಗಳು ಹತ್ತಿರವಾದಂತೆ ತಂದೆ-ತಾಯಿಗಳಿಂದ ಆ ದೇವರಿಗೆ, ಈ ದೇವರಿಗೆ ಹರಕೆ ಕಟ್ಟುವುದು ಪ್ರಾರಂಭವಾಗುತ್ತದೆ. ಸುಸೂತ್ರವಾಗಿ ಯಾವುದೇ ಆತಂಕ ತೊಂದರೆಯಾಗದಂತೆ ಹೆರಿಗೆಯಾಗಲೆಂಬುದು ಅವರೆಲ್ಲರ ಆಶಯವಾಗಿರುತ್ತದೆ. ಹೆರಿಗೆಯ ಸೂತಕ ತವರಿನವರಿಗೂ, ಗಂಡನ ಮನೆಯವರಿಗೂ ಅನ್ವಯವಾಗುತ್ತದೆ. ಆ ದಿನಗಳಲ್ಲಿ ದೇವರ ಪೂಜೆ ಮೊದಲಾದ ಮಂಗಳಕಾರ್ಯವನ್ನು ಮಾಡುವುದಿಲ್ಲ. ಸಾಮಾನ್ಯವಾಗಿ ಹನ್ನೊಂದನೆಯ ದಿನದಂದು ಕೆಲವು ಆಚರಣೆಗಳ ಮೂಲಕ ಸೂತಕವನ್ನು ಕಳೆದುಕೊಳ್ಳುತ್ತಾರೆ.

ಕುಂಬಾರರಲ್ಲಿ ಎಳೆಯ ಮಗುವಿಗೆ ಸ್ನಾನ ಮಾಡಿಸಿದ ನೀರನ್ನು ಯಾರೂ ತುಳಿಯಬಾರದೆಂಬ ಕಾರಣಕ್ಕಾಗಿ, ಒಂದು ಗುಂಡಿಯನ್ನು ತೋಡಿ ಅದರಲ್ಲಿ ಒಂದು ಸೋರೆ (ಮಡಕೆ) ಹೂಳಿ, ಮೈತೊಳೆದ ನೀರು ಅದರಲ್ಲಿ ಬೀಳುವಂತೆ ಮಾಡಿರುತ್ತಾರೆ.

ನಂತರ ಆ ನೀರನ್ನು ಯಾರೂ ತುಳಿಯದ ಬೇಲಿಯ ಮೇಲೆ ಚೆಲ್ಲುತ್ತಾರೆ. ಹೀಗೆ ಮಗು ಮೂರುತಿಂಗಳು ಆಗುವವರೆವಿಗೂ ಈ ಪದ್ಧತಿಯನ್ನು, ನಂಬಿಕೆಯನ್ನು ನಡೆಸಿಕೊಂಡು ಬರುತ್ತಾರೆ. ಈ ಸಂಪ್ರದಾಯವನ್ನು ದಕ್ಷಿಣ ಭಾರತದ ಕುಂಬಾರರ ಮನೆಗಳಲ್ಲಿ ಕಂಡುಬರುತ್ತದೆ. ನಂತರ ಆ ಮಗುವಿಗೆ ಅವರ ಮನೆದೇವರ ಹೆಸರನ್ನು ಅಥವಾ ಹಿರಿಯರ ಹೆಸರನ್ನು ಇಡುತ್ತಾರೆ. ಪೂಜಾರಿ ತಾನು ಪಡೆದ ಎಲೆ ಅಡಕೆಯನ್ನು ಎಲ್ಲರಿಗೂ ಹಂಚುತ್ತಾನೆ. ಮಗುವಿಗೆ ಐದು ತಿಂಗಳು ತುಂಬಿದಾಗ ತೊಟ್ಟಿಲು ಶಾಸ್ತ್ರ ಮಾಡುತ್ತಾರೆ. ಸೋದರ ಮಾವ ತೊಟ್ಟಿಲ ಪೂಜೆಮಾಡಿ, ತೊಟ್ಟಿಲಿನಲ್ಲಿ ಬಲಗಾಲನ್ನಿಟ್ಟು ಮೂರು ಬಾರಿ ತೂಗಿ ಅನಂತರ ತೊಟ್ಟಿಲಿಗೆ ಮಗುವನ್ನು ಹಾಕುವ ಶಾಸ್ತ್ರವನ್ನು ಸೋದರತ್ತೆ ಮತ್ತು ಇವರ ಸಂಬಂಧಿಕ ಮುತ್ತೈದೆ ಮಹಿಳೆಯರು ಮಾಡುವರು. ಮಕ್ಕಳಿಗೆ ಹೆಸರನ್ನು ಮಗುವಿನ ಕಿವಿಯಲ್ಲಿ ಗುಟ್ಟಾಗಿ ಹೇಳಿದ ಶಾಸ್ತ್ರ ಮುಗಿಸುತ್ತಾರೆ. ಅಂದು ಮನೆಯಲ್ಲಿ ಸಿಹಿಯೂಟವಿರುತ್ತದೆ.

ಬಾಣಂತಿಯಾಗಿದ್ದ ದಿನಗಳಲ್ಲಿ ಗಂಡ–ಹೆಂಡತಿ ಒಂದಾಗದಂತೆ ಐದುತಿಂಗಳು ಇಲ್ಲವೇ ಒಂಭತ್ತು ತಿಂಗಳವರೆಗೆ ಮಗು ಬಾಣಂತಿಯನ್ನು ತವರು ಮನೆಯಲ್ಲೇ ಬಳಸಿಕೊಳ್ಳುತ್ತಾರೆ. ಆರೋಗ್ಯ ದೃಷ್ಟಿಯಿಂದ ಇದು ಒಳ್ಳೆಯದು ಕೂಡ ಆಗಿದೆ. ನಿರ್ದಿಷ್ಟವಾದ ದಿನದಂದು ಮಗು ಬಾಣಂತಿಯನ್ನು ಗಂಡನ ಮನೆಯವರು ಕರೆದು–ತರುತ್ತಾರೆ. ಸಾಮಾನ್ಯವಾಗಿ ಬಾಣಂತಿಗೆ ಸೀರೆ–ಕುಪ್ಪಸ ಕೊಡುವುದುಂಟು.

**ಬಾಣಂತಿ ಉಪಚಾರ:**

ಬಾಣಂತಿಗೆ ಶೀತವಾದರೆ 'ಸನ್ನಿ'ಯಾಗಬಹುದೆಂಬ ಕಾರಣದಿಂದ ಬಹು ಎಚ್ಚರಿಕೆಯಿಂದ ಆರೈಕೆ ಮಾಡುತ್ತಾರೆ. ಗಾಳಿ ಹೆಚ್ಚು ಬೀಸದ ಮಂದ ಬೆಳಕಿನ ಕೋಣೆಯಲ್ಲಿ ಮಲಗಿಸುತ್ತಾರೆ. ಕೋಣೆಯ ಅನುಕೂಲವಿಲ್ಲದವರು ಬಾಣಂತಿ ಮಲಗುವ ಜಾಗವನ್ನು ತೆರೆಯಿಂದ ರಕ್ಷಿಸುತ್ತಾರೆ. ದಿನವೂ ಬಿಸಿ ಬಿಸಿಯಾದ ಊಟ, ಕುಡಿಯಲು ನಿಯಮಿತವಾದ ಬಿಸಿನೀರು ಕೊಡುತ್ತಾರೆ. ಬಾಣಂತಿ ಊಟ ಮಾಡುವ ಜಾಗದಲ್ಲಿ ಯಾರೂ ಓಡಾಡಿದರೆ ಆಕೆಗೆ ಹೊಟ್ಟೆನೋವು ಬರುತ್ತದೆಂದು ಭಾವಿಸಿ ಅವರನ್ನು ಮರೆಯಲ್ಲಿ ಊಟವನ್ನು ಬಡಿಸುತ್ತಾರೆ. ಆದಷ್ಟು ಬಾಣಂತಿಗೆ ಬೆಚ್ಚಗಿನ ಹೊದಿಕೆಯನ್ನು ಮೈಗೆ ಹೊದಿಸಿ ಶೀತ ಆಗದಂತೆ ಮುಂಜಾಗರೂಕತೆ ವಹಿಸುತ್ತಾರೆ. ಹಸಿಗರುಳಿನ ಹೊಟ್ಟೆ ಹಿಗ್ಗುವುದೆಂಬ ಕಾರಣದಿಂದ ಹೊಟ್ಟೆಗೆ ಬಟ್ಟೆ ಬಿಗಿದು ಕಟ್ಟುತ್ತಾರೆ. ಬಾಣಂತಿಯನ್ನು ನೋಡಲು ಬರುವವರು ಬಾಗಿಲಲ್ಲಿ ಹಾಕಿರುವ ಗಂಜಲದ (ಸಗಣಿ)ಯನ್ನು ತುಳಿದು ಬರಬೇಕು. ಇದು ವೈಜ್ಞಾನಿಕವಾಗಿ ಕೂಡ ಸರಿಯಾದುದೇ

ಆಗಿದೆ. ಸಾಮಾನ್ಯವಾಗಿ ಬಾಣಂತಿಯರು ಊಟ ಮಾಡುವಾಗ ಇತರರು ನೋಡಬಾರದೆಂದು ಹೇಳುತ್ತಾರೆ. ಹಾಗೆಯೇ ಬಾಣಂತಿ ಮಗುವಿಗೆ ಹಾಲುಣಿಸುವಾಗಲೂ ಸೆರಗನ್ನು ಮರೆ ಮಾಡಿಕೊಂಡಿರುತ್ತಾರೆ. ಇತರರ ಕಣ್ಣ ನೋಟದಲ್ಲಿ 'ಕೆಟ್ಟದೃಷ್ಟಿ' ತಾಗುವುದೆಂದು ಅದರಿಂದ ತಾಯಿ-ಮಗುವಿಗೆ ಆರೋಗ್ಯಕ್ಕೆ ಧಕ್ಕೆಯಾಗುವುದೆಂದು ನಂಬಿದ್ದಾರೆ. ದೃಷ್ಟಿ ತಾಗಿದ ಕೂಡಲೇ ಸುಳುಹು ದೊರೆತರೆ ಕೂಡಲೆ ಉಪ್ಪು-ಮೆಣಸಿನಕಾಯನ್ನು ತಾಯಿ ಮಗುವಿಗೆ ನಿವಾಳಿಸಿ ಒಲೆಯೊಳಗಿನ ಕೆಂಡದ ಮೇಲೆ ಹಾಕುತ್ತಾರೆ. ಸಂಜೆಯ ಹೊತ್ತಿನಲ್ಲಿ 'ರಚ್ಚೆನೀರು' ಅಂದರೆ (ಒಕಳಿ) ನೀರಿಗೆ ಅರಿಷಿಣ, ಸುಣ್ಣ ಬೆರಸಿ ಕೆಂಪು ನೀರು ಮಾಡಿ ಒಂದು ವೀಳೆದೆಲೆ ಇಟ್ಟು ದಾರಿಯಲ್ಲಿ ಅಡ್ಡಡ್ಡವಾಗಿ ಚೆಲ್ಲುತ್ತಾರೆ ಮತ್ತು ತೊಟ್ಟಿಲಲ್ಲಿ ಮಗು ಮಲಗಿದ್ದಾಗ ಆ ತೊಟ್ಟಿಲ ಮೇಲೆ ಬರಲ(ಪರಕೆ)ನ್ನು ಹಾಕಿರುತ್ತಾರೆ. ಹೀಗೆ ನಾನಾ ರೀತಿಯ ಸಂಪ್ರದಾಯ ನಂಬಿಕೆ ಕಾಣುತ್ತೇವೆ.

**ಹೆಣ್ಣು ಋತುಮತಿಯಾದಾಗ:** ಹೆಣ್ಣು ಬಾಲ್ಯಾವಸ್ಥೆಯಿಂದ ಪ್ರೌಢಾವಸ್ಥೆಗೆ ಅಡಿ ಇರಿಸಿದಾಗ ಆ ಹೆಣ್ಣು ಮಕ್ಕಳ ದೈಹಿಕ ಹಾಗೂ ಮಾನಸಿಕ ಬದಲಾವಣೆಗಳಾಗುವುದು ಸಹಜ. ಒಂದೊಂದು ಜಾತಿಯವರು ಒಂದೊಂದು ರೀತಿಯಲ್ಲಿ ಕಾರ್ಯವನ್ನು ಮಾಡುತ್ತಾರೆ. ಕುಂಬಾರರ ಹುಡುಗಿಯರು ಮೈ ನೆರೆದಾಗ ಅವರಿಗೆ ಮಾಡುವ ಕಾರ್ಯವಿಧಾನಗಳೇ ಬೇರೆಯಾಗಿ ಕಾಣುತ್ತೇವೆ. ಹುಡುಗಿ 'ದೊಡ್ಡವಳಾದವಳು' (ಮೈನೆರೆಯುವುದು) ಎಂದು ತಿಳಿದ ತಕ್ಷಣ ಅವಳನ್ನು ಮೈಲಿಗೆ ಎಂದು ಭಾವಿಸಿ ಆ ಹುಡುಗಿಯನ್ನು ತಾವು ವಾಸಿಸುವ ಮನೆಯಿಂದ ಹೊರಗೆ ಹಾಕುವರು. ಹೆಣ್ಣು ಋತುಮತಿಯಾದ ದಿನದಿಂದ ಒಂಭತ್ತು ದಿನಗಳ ಕಾಲ ಮನೆಯಿಂದ ಹೊರಗಿರಿಸಲಾಗುತ್ತದೆ. ಆ ಅವಧಿಯಲ್ಲಿ ಅವಳು ಅಶುದ್ಧ, ಅಪವಿತ್ರವೆಂದು ಭಾವಿಸಲಾಗುತ್ತದೆ. ಆಕೆಯ ತನ್ನ ಸೋದರ ಮಾವಂದಿರು ಅರಳಿಸೊಪ್ಪು, ಆಲದಸೊಪ್ಪು, ಬಸರಿಸೊಪ್ಪು, ಅಂಕಾಲೆ, ಹೊಂಗೆ, ಬೇವಿನ ಹಸುರಲೆ, ಹತ್ತಿಸೊಪ್ಪುಗಳನ್ನು ಕಡಿದು ಅವುಗಳ ಜೊತೆಗೆ ಒಂದು ಎಕ್ಕದ ಗಿಡದ ಕೊನೆಯನ್ನು ಕಡಿದು ಸೊಪ್ಪನ್ನೆಲ್ಲಾ ಸೇರಿಸಿ ಅದರಿಂದ ಒಂದು 'ಗುಡ್ಲನ್ನು' ಹಾಕುವರು. ಇದನ್ನು 'ಗುಡ್ಲುಹಾಕುವ ಶಾಸ್ತ್ರ' ಎನ್ನುತ್ತಾರೆ. ಹೀಗೆ ಮೂರು ದಿವಸಗಳ ತನಕ ಇರಬೇಕು. ನಂತರ ಅನಂತರ ಅಗಸರನ್ನು ಕರೆಸಿ ಮೈನೆರೆದ ಹುಡುಗಿಗೆ ಯಾರು ಓಡಾಡದ ಸ್ಥಳದಲ್ಲಿ ಎಣ್ಣೆ ನೀರನ್ನು ಹಾಕಿಸಿ ಅವರು ಕೊಟ್ಟ ಮಡಿ ಬಟ್ಟೆಯನ್ನುಟ್ಟು ಅವಳನ್ನು ಗುಡ್ಲುಗೆ ಬಿಡುವರು. ಮೂರನೇ ದಿವಸ ರಾತ್ರಿ ಗುಡ್ಲುಗೆ ಬಳಸಿರುವ ಎಲ್ಲಾ ವಸ್ತುಗಳನ್ನು ಸೋದರ ಮಾವ ಸುಟ್ಟುಹಾಕುತ್ತಾನೆ. ಹಸಿರುಗಿಡಗಳನ್ನು (ಸೊಪ್ಪು)

ಹಾಕುವುದರಿಂದ ನಮ್ಮ ಸಂಸ್ಕೃತಿಯಲ್ಲಿ ಶುಭದ ಸಂಕೇತವಾಗಿ ಬಳಸುವುದರಿಂದ ಈ ಪದ್ಧತಿಗಳನ್ನು ಅನುಸರಿಸುತ್ತಾರೆ. ಬೇರೆ ಜನಾಂಗದ ಸಂಪ್ರದಾಯ ಪದ್ಧತಿಗಳು ಈ ಪದ್ಧತಿ ಕಂಡುಬಂದರೂ ಈ ಕುಂಬಾರರ ಜನಾಂಗದ ಸಂಸ್ಕೃತಿ ಸಂಪ್ರದಾಯ ಇವರಷ್ಟು ವಿಶಿಷ್ಟತೆ ಕಂಡುಬರುವುದಿಲ್ಲ.

ಮೈನೆರೆದ ಹುಡುಗಿಯನ್ನು ಹಸಿರು ಗುಡ್ಲೊಳಗೆ ಬಿಡುವ ಸಂದರ್ಭದಲ್ಲಿ ಆ ರಾತ್ರಿ ಅವಳೊಂದಿಗೆ ಇರಲು ಒಬ್ಬ ಹಿರಿಯ ಹೆಂಗಸನ್ನು ನೇಮಿಸುವರು. ಇವಳು ಆ ರಾತ್ರಿ ಅವಳೊಂದಿಗಿದ್ದು ಅವಳಿಗೆ ಬೇಸರ ಕಳೆಯಲು ಸಹಾಯಕಳಾಗುತ್ತಾಳೆ. ಆ ಹುಡುಗಿ ಊಟ ಮಾಡುವುದಕ್ಕೆ ಆಲದ ಎಲೆಯನ್ನು ಕೊಡುತ್ತಾರೆ. ಅವಳು ಆ ಎಲೆಯನ್ನು ತೊಳೆದು ಅದರ ಮೇಲೆ ಹಾಕಿದ ಊಟವನ್ನು ಅಲ್ಲಿಗೆ ಬಂದಿರುವ ಮೂರು ಚಿಕ್ಕಮಕ್ಕಳಿಗೆ ಒಂದೊಂದು ಹಿಡಿಯನ್ನು ತನ್ನ ಕೈಯಿಂದ ಕೊಟ್ಟ ಬಳಿಕ ತಾನು ಮೂರು ಬೆರಳಿನಿಂದ ತಿನ್ನಬೇಕು. ಆನಂತರ ಹುಡುಗಿಯ ಮಡಿಲಿಗೆ ಕೊಬ್ಬರಿ, ಬೆಲ್ಲ, ಮಂಡಕ್ಕಿ, ಕಡ್ಲೆ ಮೊದಲಾದ ತಿಂಡಿಗಳನ್ನು ಹಾಕುವರು. ಋತುಮತಿಯಾದ ಹುಡುಗಿ ಮನೆಯಿಂದ ಹೊರಗೆ ಇರುವಂತಹ ಸಂದರ್ಭದಲ್ಲಿ ಅವಳ ಮನೆಯವರು ವರ್ಷದ ಶನಿಯನ್ನು (ಸೂತಕವನ್ನು) ಕಳೆದುಕೊಳ್ಳಲು ತಮ್ಮ ಮನೆಯನ್ನು ಸುಣ್ಣದಿಂದ ಬಳಿದು ಶುದ್ದಗೊಳಿಸುವರು. ಅನಂತರ ಮಡಿವಾಳರು (ಅಗಸರು) ಬಂದು ಅವಳಿದ್ದ 'ಗುಡ್ಲು'ಗೆ ಗೋಮೂತ್ರದಿಂದ ತೊಳಸಿ ಎಲೆಯಿಂದ ಚಿಮುಕಿಸಿ ಅವಳನ್ನು ಮನೆಯ ದೇವರಿಗೆ ಪೂಜೆಯನ್ನು ಮಾಡಿಸಿ, ಪೂಜಾರಿಗೆ ಎಲೆ, ಅಡಿಕೆ ತಾಂಬೂಲವನ್ನು ಕೊಟ್ಟು ಅವಳನ್ನು ಕುರಿತು ಇತರ ಮುತ್ತೈದೆಯರು ಹಾಡುಗಳನ್ನು ಹಾಡುವರು. ನಂತರ ಅವರ ಸೋದರಮಾವನು ತಂದ ಹೊಸಬಟ್ಟೆ (ಸೀರೆ)ಯನ್ನು ಉಡಿಸಿ ಶೃಂಗಾರ ಮಾಡಿ ಕೊರಳಿಗೆ ಹೂಮಾಲೆಯನ್ನು ಹಾಕಿ ಅವಳನ್ನು ಚಾಪೆ ಅಥವಾ 'ಹಸೆಮಣೆ'ಯ ಮೇಲೆ ಕೂರಿಸಿ, ಮುತ್ತೈದೆಯರು ವಿವಿಧ ಶಾಸ್ತ್ರ(ಅಕ್ಷತೆ)ಗಳನ್ನು ಮಾಡುವರು. ನಂತರ ಅವಳಿಗೆ ಆರತಿಯನ್ನು ಮಾಡಿ ಅವಳ ಮಡಿಲಿಗೆ ಬಾಳೆಹಣ್ಣು ಚಿಪ್ಪು, ತೆಂಗಿನಕಾಯಿ, ಎಲೆ, ಅಡಿಕೆ, ಅರಿಸಿನ, ಕುಂಕುಮ ರವಿಕೆ ಇವುಗಳನ್ನೆಲ್ಲ ಒಂದು ತಟ್ಟೆಯಲ್ಲಿ ತುಂಬಿ ಆ ಹುಡುಗಿಯ ಮಡಿಲಿಗೆ ಹಾಕುವರು.

ಹೀಗೆ ಕುಂಬಾರರ ಸಂಸ್ಕೃತಿ ಮೈನೆರೆದ ಹೆಣ್ಣು ಮಕ್ಕಳಿಗೆ ಸುಮಾರು ಐದು, ಆರು ತಿಂಗಳವರೆವಿಗೂ ಮೈನೆರೆದ ಹುಡುಗಿಗೆ ಮೆಂತ್ಯ, ಉದ್ದಿನಕಾಳು, ಗೋಧಿ, ರಾಗಿ, ಅಕ್ಕಿ, ಕೊಬ್ಬರಿ, ಬೆಲ್ಲ ಈ ಎಲ್ಲಾ ಪದಾರ್ಥಗಳಿಂದ ಹಿಟ್ಟನ್ನು ತಯಾರಿಸಿ ಅದರಿಂದ ಮುದ್ದೆಯನ್ನು ಮಾಡಿ ಆ ಮುದ್ದೆಯನ್ನು ತುಪ್ಪದ ಜೊತೆಗೆ ಸೇರಿಸಿ, ಬೆಳಗಿನ ಸಮಯದಲ್ಲಿ ತಿನ್ನಲು ಕೊಡುವರು. ಕಾರಣ ಅವಳ ಸೊಂಟ ಬಲವಾಗಲಿ ಎನ್ನುವ

ಉದ್ದೇಶದಿಂದ ಹೆಣ್ಣಿಗೆ ಈ ಸಂದರ್ಭದಲ್ಲಿ ಸಿಕ್ಕಂತಹ ಸುಖ ಹೆರಿಗೆಯಾದಾಗ ಸಿಗುವುದಿಲ್ಲ ಎಂದು ಹಾಗೆ ಹಿರಿಯರು ಹೀಗೆ ಮಾಡುತ್ತಾರೆ. ಈ ಪದ್ಧತಿ ಸರ್ವೇಸಾಮಾನ್ಯವಾಗಿ ಎಲ್ಲಾ ಸಮುದಾಯದಲ್ಲಿ ಕಂಡುಬರುತ್ತದೆ. ಋತುಮತಿಯಾದ ಹೆಣ್ಣುಮಕ್ಕಳು ಮುಟ್ಟಾದಾಗ ಮೂರು ಅಥವಾ ನಾಲ್ಕು ದಿವಸದವರೆಗೆ ಮನೆಯ ಪ್ರತ್ಯೇಕ ಜಾಗದಲ್ಲಿ ಇದ್ದು, ಬಳಿಕ ಸ್ನಾನಮಾಡಿ ಒಳಗೆ ಬರುವ ಪದ್ಧತಿ ಇದೆ. ಕಾಲ ಕಳೆದಂತೆ ಈ ಜನರಲ್ಲೂ ವಿದ್ಯಾವಂತರಾಗಿದ್ದರೂ, ಅವಿದ್ಯಾವಂತರಾಗಿದ್ದರೂ ಕೂಡ ಹಿಂದಿನಿಂದ ನಡೆಸಿಕೊಂಡು ಬಂದಿರುವ ಈ ಆಚರಣೆಗಳನ್ನು ಇಂದಿಗೂ ಸಹ ಆಚರಿಸಿಕೊಂಡು ಬರುತ್ತಿರುವುದನ್ನು ನಾವು ಕಾಣಬಹುದಾಗಿದೆ.

**ಮದುವೆ ಪದ್ಧತಿ:**

ಮನುಷ್ಯನ ಜೀವನದಲ್ಲಿ ಮದುವೆಯೂ ಒಂದು ಮುಖ್ಯ ಘಟ್ಟ. ಬಾಲ್ಯಾವಸ್ಥೆಯನ್ನು ಕಳೆದು ಯೌವನಕ್ಕೆ ಬಂದ ಮೇಲೆ ಆತ ಗೃಹಸ್ಥ ಜೀವನಕ್ಕೆ ಕಾಲಿಡುತ್ತಾನೆ. ಇದು ಪ್ರತಿಯೊಬ್ಬ ವ್ಯಕ್ತಿಗೂ ಮಹತ್ವವಾದ ಘಟ್ಟ. ಈ ಘಟ್ಟದಲ್ಲಿ ಅವನು ಅನೇಕ ಋಣಗಳನ್ನು ತೀರಿಸಿಕೊಳ್ಳಬೇಕಾಗುತ್ತದೆ. ಈತ ಸಾಂಸಾರಿಕ ಜೀವನಕ್ಕೆ ಕಾಲಿಟ್ಟರೆ ಅವನಿಗೆ ಹಲವು ಕಷ್ಟ ಸುಖಗಳು ಎದುರಾಗುತ್ತವೆ. ಸಂಸಾರಿಯಾಗದವನಿಗೆ ಜೀವನದಲ್ಲಿನ ಕೆಲವು ಸಂಪ್ರದಾಯಗಳು ಆತನಿಗೆ ತಿಳಿಯುವುದೇ ಇಲ್ಲ. ಹಿಂದೂ ಧರ್ಮದ ಪ್ರಕಾರ ಹಿಂದೂಗಳು ಗೃಹಸ್ಥರಾಗದೇ ಹೋದರೆ ಅವರಿಗೆ ಸದ್ಗತಿ ದೊರೆಯುವುದೇ ಇಲ್ಲ. ಆತ ಹುಟ್ಟಿದ ಮೇಲೆ ಮದುವೆಯಾಗಲೇಬೇಕು. "ಸಾವಿರ ಸುಳ್ಳು ಹೇಳಿ ಮದುವೆಯಾಗು" ಎಂಬ ಗಾದೆ ನಮ್ಮ ಜನಪದರಲ್ಲಿರುವಂತೆ, ಅವರು ಯಾವ ಸುಳ್ಳನ್ನು ಹೇಳದೆ ಮದುವೆಯಾಗುವುದು ಸೂಕ್ತ.

ಕುಂಬಾರ ಜಾತಿಯವರು ಮಾಡುವ ಮದುವೆಯು ಇತರೆ ಜಾತಿಯವರು ಮಾಡುವ ಮದುವೆಗಿಂತ ಭಿನ್ನವೂ ವಿಶಿಷ್ಟವು ಆಗಿರುತ್ತದೆ. ಕುಂಬಾರರಲ್ಲಿ ಹಳೆಯ ಸಂಬಂಧದಲ್ಲಿ ಹೆಣ್ಣನ್ನು ತರುವುದು ರೂಢಿಯಲ್ಲಿತ್ತು. ಕಾಲಧರ್ಮ ಬದಲಾದಂತೆ ಹೆಣ್ಣನ್ನು ತರಲು ಪರರ ಊರುಗಳಿಗೆ ಹೋಗುವುದು ಅನಿವಾರ್ಯವಾಯಿತು. ಹೊಸ ಸಂಬಂಧಗಳ ಹೆಣ್ಣನ್ನು ನೋಡಲು ನೇರವಾಗಿ ಹೋಗುತ್ತಿರಲಿಲ್ಲ. ಹೆಣ್ಣಿನ ಬಣ್ಣ, ಎತ್ತರ, ದಪ್ಪ ಮೊದಲಾದವುಗಳನ್ನು ತಿಳಿದುಕೊಂಡು ಗಂಡು-ಹೆಣ್ಣಿನ ಈಡು ಜೋಡನ್ನು ನಿರ್ಧರಿಸಿ, ಹೆಣ್ಣಿನ ಗುಣಸ್ವಭಾವಗಳನ್ನು ಅವರಿವರಿಂದ ತಿಳಿದುಕೊಂಡು ಹೋಗುತ್ತಿದ್ದರು. ಇವರಲ್ಲಿ ಸಾಂಪ್ರದಾಯಿಕ ಮದುವೆ ಮೂರು ದಿನಗಳ ಕಾಲ ನಡೆಯುತ್ತಿತ್ತು. ಹೆಣ್ಣನ್ನು ನೋಡಿ 'ಗಟ್ಟಿ' ಮಾಡುವುದು (ನಿಶ್ಚಿತಾರ್ಥ) ಐರಣಿ

ತರುವುದು, ಶಾಸ್ತ್ರ ಮತ್ತು ಚಪ್ಪರ ಹಾಕುವ ಶಾಸ್ತ್ರ, ಧಾರಾಮುಹೂರ್ತ, ಓದುವಕ್ಕಿ ಶಾಸ್ತ್ರ, ಬೂವಶಾಸ್ತ್ರ, ಪ್ರಸ್ತ ಈ ಕಾರ್ಯಗಳು ಮೂರು ದಿನಗಳ ಕಾಲ ನಡೆಯುತ್ತವೆ. ಇವರಲ್ಲಿ ಒಳಬಾಂಧವ್ಯ ಮತ್ತು ಹೊರಬಾಂಧವ್ಯ ವಿವಾಹಗಳಿರುವುದನ್ನು ನೋಡಬಹುದು. ಕುಲದ ವಿಚಾರದಲ್ಲಿ ಸುಸೂತ್ರವಾಗಿ ಒಪ್ಪಿಗೆಯಾಗಿ ಬಂದ ಸಂದರ್ಭದಲ್ಲಿ ಶುಭ ಕಾರ್ಯವನ್ನು ಮುಂದುವರೆಸುತ್ತಾರೆ.

ಹಿಂದೊಮ್ಮೆ ಮುತ್ತೈದೆಯರು ಮದುವೆ ಸಮಾರಂಭದ ಎರಡನೆಯ ದಿವಸ ಕುಂಬಾರನ ಮನೆಯಿಂದ ಐರಾಣಿ ತರುವ ಅಗತ್ಯ ಸಂಪ್ರದಾಯವಿತ್ತು. ಮನೆಯಿಂದ 'ಐರಾಣಿ' ತರಲು ಹೊರಟಾಗ ಹಾದಿಯಲ್ಲಿ ಕೇಳುತ್ತಾರೆ. 'ಜಾಣ ಕುಂಬಾರನ ಮನಿ ಯಾವ ಕಡಿಗಾದ'? ಅದಕ್ಕೆ ಉತ್ತರ ಯಾರ ಮನೆಯ ಎಡಬಲಕ್ಕೆ ಕಪ್ಪುರದ ತಿಪ್ಪೆ ಇವೆಯೋ ಅದೇ ಅವನ ಮನೆ. ಕುಂಬಾರ ಆವಿಗೆಯಲ್ಲಿ ಸುಟ್ಟು ಸುಟ್ಟು ಕುಪ್ಪೆಯಾಗಿರುವ ಬಿಳಿಬೂದಿ ಜನಪದ ಕವಿಯ ಕಣ್ಣಿಗೆ ಕಪ್ಪುರದ ತಿಪ್ಪೆ. ಆ ಹಾಡಿನ ಚೆಲುವನ್ನು ಹಾಡಿ ಸವಿಯಬೇಕು; ಕೇಳಿ ಸವಿಯಬೇಕು;

"ಜಾಣ ಕುಂಬಾರನ ಮನಿ ಯಾವ ಕಡಿಗದ?
ಕಪ್ಪುರದ ತಿಪ್ಪಿ ಎಡ ಬಲ। ಸೋ. ॥೧॥

ಕಪ್ಪುರದ ತಿಪ್ಪಿ ಎಡಬಲ ಮಾಡಿಕೊಂಡ
ಜಾಣ ಕುಂಬಾರನ ಮನಿಗ್ವಾದಾರ । ಸೋ. ॥೨॥

ಮುಂಜಾಳೆದ್ದ ಕುಂಬಾರಣ್ಣ ಮಸರ ಬಾನುಂಡಾನ
ಹಾರ್‍ಯಾರಿ ಕೆಸರ ತುಳದ್ಯಾ ನ। ಸೋ ॥೩॥

ಹಾರಿ ಹಾರೀ ಕೆಸರ ತುಳದ ತಾ ಮಾಡ್ಯಾನ
ನಾರ್‍ಯಾರು ಹೊರುವ ಒಂದ್ಯೆರಾಣಿ । ಸೋ. ॥೪॥

ಕಡಗದ ಕೈಯಕ್ಕಿ ಕೊಡವಿ ಕುಂಬಾರವ್ವ
ಕೊಡದ ಮ್ಯಾಲ್ಯಾನ ಬರ ದಾ ಳ । ಸೋ॥೫॥

ಕೊಡದ ಮ್ಯಾಲ್ಯಾನ ಬರದಾಳ ನಮ್ಮೂರ
ಬಾಳಿ ಬನದಾನೊಂದರ ಗಿಣಿಯ । ಸೋ ॥೬॥"[೧]

ಕುಂಬಾರರು ಮದುವೆಗೆ ಮೂರು ದಿನಗಳಿರುವಾಗಲೇ ಐರಾಣಿ ತರುವ ಸಂಪ್ರದಾಯ ಇವರಲ್ಲಿದೆ. ತಾವು ಎಷ್ಟೇ ಮಡಿಕೆ-ಕುಡಿಕೆ ಮಾಡಿದರೂ ತಾವೇ ತಮ್ಮ

೧. ಜನಪದ ಮಹಾಕಾವ್ಯ-ಡಾ. ತೀ.ನಂ.ಶಂಕರನಾರಾಯಣ, ಪುಟ – ೯.

ಮದುವೆಗೆ ಬಳಸುವುದಿಲ್ಲ. ಅವರು ತಮ್ಮ ವಿವಾಹ ಕಾರ್ಯಕ್ಕೆ ಬೇರೆಯವರು ಮಾಡಿರುವ ಮಡಕೆ–ಕುಡಿಕೆಯನ್ನು ತರುತ್ತಾರೆ. ಅದು ಹೇಗೆ ಎಂದರೆ ಒಂದು ಬಿದಿರಿನ ಬುಟ್ಟಿಯಲ್ಲಿ ಒಂದು ಎಲೆಕಟ್ಟು, ಅಡಿಕೆ, ತೆಂಗಿನಕಾಯಿ, ಒಂದು ಕುಡಿಕೆ ಎಣ್ಣೆ, ವಿಭೂತಿ, ಅರಿಶಿನ ಕುಂಕುಮ ಇತ್ಯಾದಿಗಳನ್ನು ತೆಗೆದುಕೊಂಡು ಐದು ಜನ ಮುತ್ತೈದೆಯರು ವಾದ್ಯಗಳ ಸಮೇತ ಪಕ್ಕದ ಮನೆಯ ಕುಂಬಾರರ ಮನೆಗೆ ಹೋಗಿ ಅವರಿಗೆ ಕಾಣಿಕೆಕೊಟ್ಟು ಐರಾಣಿ ಮತ್ತಿತರ ಮಡಕೆ–ಕುಡಿಕೆಗಳನ್ನವರು ತರುವುದಕ್ಕೆ ಹೊಸ ಮಡಕೆ ತರುವುದು ಎನ್ನುತ್ತಾರೆ.

ಕುಂಬಾರರಲ್ಲಿ 'ಸಾಲಾವಳಿ' 'ಹೆಸರುಬಲ' ಕೂಡಿ ಬಂದರೆ ಕುಲದ ಕುಟುಂಬದ ಮುಖಂಡರ ಮನೆಗೆ ಅಂದರೆ 'ಕಟ್ಟೀ ಮನೆ'ಗೇ ಹೋಗಿ ಲಗ್ನ ಕಟ್ಟಿಸಿಕೊಂಡು ಬರುತ್ತಾರೆ. ಈಗ ಕೆಲವು ಮನೆತನದಲ್ಲಿ ಮನೆಯಲ್ಲೇ ಲಗ್ನಕಟ್ಟುವುದು ರೂಢಿಯಲ್ಲಿದೆ, ಕೆಲವರಲ್ಲಿ ಕಲ್ಯಾಣ ಮಂಟಪದಲ್ಲಿ ಕಟ್ಟುವ ಪದ್ಧತಿಯು ಕೂಡ ಇದೆ. 'ತೆರ' ಪದ್ಧತಿ ಕುಂಬಾರರಲ್ಲಿದೆ. ವೀಳೆಶಾಸ್ತ್ರದಲ್ಲಿ ಕುಲಸ್ವಾಮಿಗಳು ಹೆಣ್ಣಿನವರನ್ನು 'ನಿಮ್ಮ ತೆರೆ ಬಂದೈತೊ' ಎನ್ನುತ್ತಾರೆ. ಆಗ ಬಂದಿದ್ದರೆ 'ಹೂಂ' ಇಲ್ಲವಾದರೆ 'ಇಲ್ಲ' ಎನ್ನುತ್ತಾರೆ. ತೆರ ಕೊಟ್ಟಿಲ್ಲದಿದ್ದರೆ ೧೮ ವರಹ ತೆರ ಕೊಡಲೇಬೇಕು. ಈಗಲೂ ಕೆಲವು ಕಡೆ ರೂಢಿಯಲ್ಲಿರುವುದನ್ನು ಕಾಣುತ್ತೇವೆ. ಕುಂಬಾರರಲ್ಲಿ ಚಪ್ಪರ ಹಾಕುವ ಸಂಪ್ರದಾಯವು ಹೆಣ್ಣು ಮತ್ತು ಗಂಡಿನ ಮನೆಗಳ ಮುಂದೆ ಕಂಡುಬರುತ್ತದೆ. ಚಪ್ಪರಕ್ಕೆ ಬೇಕಾಗುವ ಸಾಮಾಗ್ರಿಗಳನ್ನು ತರಲು ಹೋಗುವಾಗ ಕುಡುಗೋಲು, ಮಚ್ಚು, ಕೊಡಲಿ ಮುಂತಾದ ಆಯುಧಗಳನ್ನು ಪೂಜಿಸುತ್ತಾರೆ. ಹೆಣ್ಣು ಮದುವೆ ಹಿಂದಿನ ದಿವಸ ತಾಯಿ ಮನೆಯಲ್ಲಿ ಹಸೆಮಣೆಯ ಮೇಲೆ ಕೂರಿಸಿ ಕಳಸವನ್ನು ಮುಂದೆ ಇಟ್ಟು ಅಕ್ಕಿಶಾಸ್ತ್ರವನ್ನು ಮಾಡಿಸುತ್ತಾರೆ. ಮದುವೆಯ ದಿವಸ ಬೆಳಿಗ್ಗೆ ಧಾರೆಗಿಂತ ಮೊದಲು ಈ ಜಾತಿಯವರಲ್ಲಿ ದೇವತಾಕಾರ್ಯವಿರುತ್ತದೆ. ಕೆರೆಯ ಬಳಿ ಒಂಭತ್ತು ಮಡಿಕೆ (ಗಡಿಗೆ)ಗಳನ್ನು ಇಟ್ಟು ಅವುಗಳಿಗೆ ಸಮನಾಗಿ ನೀರನ್ನು ತುಂಬಿ ಮೂರು ಬಗೆಯ ಧಾನ್ಯಗಳನ್ನು ಬಾಳೆಯ ಎಲೆಯ ಮೇಲೆ ಹಾಕಿ ಮತ್ತು ಆ ಗಡಿಗೆಗಳಿಗೆ ಹೊಂಬಾಳೆಯನ್ನು ಧರಿಸಿ, ಅರಿಸಿನ, ಕುಂಕುಮ, ನಾಮಗಳನ್ನು ಬರೆದು ಪೂಜಿಸುತ್ತಾರೆ. ಪೂಜಿಸುವಾಗ ಆ ಜನಾಂಗದ ಮನೆಯ ದೇವರನ್ನು ನೆನೆದುಕೊಳ್ಳುತ್ತಾ ಗಡಿಗೆಗಳಿಗೆ ತಪ್ಪು ಕಾಣಿಕೆಯನ್ನು (ಒಂದು ರೂ. ನಾಣ್ಯ) ಹಾಕುತ್ತಾರೆ.

ಕುಂಬಾರರ ಮದುವೆಯ ಸಂಪ್ರದಾಯದಲ್ಲಿ ನಂಬಿಕೆ ಮತ್ತು ಆಚರಣೆಗಳು ತುಂಬಾ ಕಟ್ಟುನಿಟ್ಟಾಗಿ ಪ್ರತಿ ಜನಾಂಗದ ಕುಂಬಾರರು ನಡೆಸಿಕೊಂಡು ಬಂದಿದ್ದಾರೆ. ಮದುವೆಯ ಧಾರಾಮುಹೂರ್ತದ ದಿವಸ ದೇವರು ತರುವ ಕಾರ್ಯದಲ್ಲಿ ಪೂಜೆಯಾದ

ಬಳಿಕ ಆ ಜನಾಂಗದಲ್ಲಿ ಕೈಯಲ್ಲಿ 'ಅರಗ' (ದೇವರು) ಹಿಡಿದು ದಾಸಯ್ಯರೆಂದು ಕರೆಸಿಕೊಳ್ಳುವ ಆ ಜನಾಂಗದಲ್ಲಿ 'ಮಣೆಸೇವೆ'ಯನ್ನು ಮಾಡುತ್ತಾರೆ. ಈ ತರಹದ ಸಂಪ್ರದಾಯ ಕೆಲವು ಮನೆತನದವರು ಮಾಡಿದರೆ, ಇನ್ನೂ ಕೆಲವು ಮನೆತನದಲ್ಲಿ ವೀರಭದ್ರನ ಕುಣಿತವನ್ನು ಮಾಡುತ್ತಾರೆ. ಈ ಸಂಪ್ರದಾಯ ಪ್ರತಿ ಕುಂಬಾರರ ಜಾತಿ ಪ್ರತಿ ಊರಿನಲ್ಲಿ ಕಂಡುಬರುತ್ತದೆ. ಇಂತಹ ನಂಬಿಕೆ ಅವರಲ್ಲಿ ತುಂಬ ಪ್ರಮುಖವಾದುದು. ಧಾರೆಯ ಸಂದರ್ಭದಲ್ಲಿ ಹೆಣ್ಣಿನ ತಲೆಗೆ ಬಾಸಿಂಗವನ್ನು ಕಟ್ಟುವರು. ಗಂಡಿಗೂ ಕೂಡ ಬಾಸಿಂಗವನ್ನು ಕಟ್ಟುವರು. ಹೆಣ್ಣಿನ ಸೋದರಮಾವ ಮದುವೆಯ ಹೆಣ್ಣಿನ ಕೈಹಿಡಿದು ಧಾರಾಮುಹೂರ್ತಕ್ಕೆ ಕರೆತರುತ್ತಾನೆ. ಆ ಸಮಯದಲ್ಲಿ ಗಂಡಿನ ಮುಖದ ಮುಂದೆ ಒಂದು ತೆರೆಯನ್ನು ಬಿಟ್ಟಿರುತ್ತಾರೆ. ನಂತರ ಕೆಲವು ಶಾಸ್ತ್ರಗಳನ್ನು ಮಾಡಿದ ನಂತರ ಹೆಣ್ಣಿಗೆ ತಾಳಿಯನ್ನು ಕಟ್ಟಿಸುತ್ತಾರೆ. ತಾಳಿ ಕಟ್ಟಿದ ನಂತರ ಬಂಧುಬಳಗದವರೆಲ್ಲ ಹಾಲು ಎರೆಯುವ ಶಾಸ್ತ್ರ ಮಾಡುವರು. ಈ ಸಂದರ್ಭದಲ್ಲಿ ಎಲೆಅಡಿಕೆಯನ್ನು ಹಸೆಯ ಮೇಲಿಟ್ಟು ಕುಲದವರಿಗೆ ಎಲೆ, ಅಡಿಕೆ ವೀಳ್ಯವನ್ನು ಕೊಡುತ್ತಾರೆ. ಶಾಸ್ತ್ರಮುಗಿದ ನಂತರ ಗಂಗೆ ಪೂಜೆಯನ್ನು ಮಾಡುವರು. ಹೆಣ್ಣನ್ನು ಬಾವಿಯ ಹತ್ತಿರ ಕರೆದುಕೊಂಡು ಹೋಗಿ ಅಲ್ಲಿ ಹೆಣ್ಣಿನ ಕೈಯಿಂದ ಗಂಗೆಯನ್ನು ಪೂಜಿಸಿ ಬಳಿಕ ತುಂಬಿದ ಗಡಿಗೆಯನ್ನು ಮೊದಲು ಹೆಣ್ಣಿಗೆ ಹೊರಿಸಿ ಬಳಿಕ ಇನ್ನೂ ಇಬ್ಬರು ಮುತ್ತೈದೆಯರಿಗೆ ಹೊರಿಸಿ ವಾದ್ಯಗಳ ಸಮೇತ ಕಳಸವನ್ನು ಹಿಡಿದು ಮೆರವಣಿಗೆಯ ಮೂಲಕ ಮನೆಗೆ ಕರೆದುಕೊಂಡು ಬರುವರು. ಈ ಸಂದರ್ಭದಲ್ಲಿ ಮನೆಯ ಬಾಗಿಲಲ್ಲಿ ಗಂಡು, ಹೆಣ್ಣು ಹೊತ್ತ ಗಡಿಗೆಯನ್ನು ಪೂಜಿಸಿ ಅದನ್ನು ಇಳಿಸಿಕೊಂಡು ಹೆಣ್ಣಿನ ಕೈಯನ್ನು ಬಲವಾಗಿ ಹಿಡಿದು ಮನೆಯ ಒಳಕ್ಕೆ ಕರೆದುಕೊಳ್ಳುವ ಪದ್ಧತಿ ಈ ಜನಾಂಗದಲ್ಲಿ ಕಾಣಬಹುದು.

ಕುಂಬಾರರ ಸಂಪ್ರದಾಯದಲ್ಲಿ ಮನೆಯೊಳಗೆ ಹೋಗುವ ಸಂದರ್ಭದಲ್ಲಿ ಮನೆಯ ಒಳಗೆ ಬಾಗಿಲಿಗೆ ಎದುರು ಇರುವ ಗೋಡೆಗೆ ಎದುರು ಕಂಚಿನ ತಟ್ಟೆಯನ್ನು ಇಟ್ಟು ಮಣ್ಣಿನದೀಪವನ್ನು ಇಟ್ಟು, ಮದುಮಕ್ಕಳ ಕೈಗೆ ಅಕ್ಕಿಯನ್ನು ಹಾಕಿ ಅವರಿಂದ ಇಂತಹ ಮಾತನ್ನು ಹೇಳಿಸುತ್ತಾರೆ. ಹೆಣ್ಣು ಈ ಮಾತನ್ನು ಹೇಳುವಾಗ "ನನ್ನ ಅತ್ತೆ ಮಾವನಮನೆ, ಹಾಲು ಉಕ್ಕಿದಂಗೆ ಉಕ್ಕಲಿ" ಎಂದು ಮೂರು ಬಾರಿ ತನ್ನ ಕೈಯ್ಯಲ್ಲಿರುವ ಎಳ್ಳು ಅಕ್ಕಿಯನ್ನು ಎದುರಿಗೆ ಇಟ್ಟಿರುವ ಕಂಚಿನ ತಟ್ಟೆಗೆ ಎರಚಬೇಕು. ಹಾಗೆಯೇ ಗಂಡು ಕೂಡ ನಮ್ಮ ತಂದೆತಾಯಿಯ ಮನೆ "ಹಾಲುಕ್ಕುವಂತೆ ಉಕ್ಕಲಿ" ಎಂದು ಮೂರುಬಾರಿ ತನ್ನ ಕೈಯಲ್ಲಿರುವ ಅಕ್ಕಿ ಎಳ್ಳನ್ನು ತಟ್ಟೆಗೆ ಎರಚುವನು. ಇದನ್ನು ಮನೆ ತುಂಬುವ ಶಾಸ್ತ್ರ ಎನ್ನುತ್ತಾರೆ. ಆಮೇಲೆ ಹೆಣ್ಣಿನ ಕೈಯಿಂದ ತಾಯಿ ಮೊಸರು

ಕಡೆಸುವ ಶಾಸ್ತ್ರ ಮಾಡುವರು. ಅಂದು ರಾತ್ರಿ ಮದುಮಕ್ಕಳಿಗೆ ಆರತಿ ಮಾಡಿ ಪ್ರಸ್ತದ ಕಾರ್ಯವನ್ನು ಮುಗಿಸುವರು.

ಹೀಗೆ ಕುಂಬಾರರು ಅನೇಕ ಸಂಪ್ರದಾಯಗಳನ್ನು ಇಂದಿಗೂ ಆಚರಣೆಗಳ ಮೂಲಕ ಬಂದಿರುವ ಪದ್ಧತಿಯನ್ನು ಗಮನಿಸಬಹುದು. ಈ ಜನಾಂಗದಲ್ಲಿ ಒಂದು ಬಗೆಯ ವಿಶಿಷ್ಟ ರೀತಿಯಲ್ಲಿ ನಡೆದಿರುವ ಸಂಪ್ರದಾಯವನ್ನು ಕಾಣಬಹುದು.

**ಮರಣ ಸಂಪ್ರದಾಯ:**

ಮಾನವನಿಗೆ ಹುಟ್ಟು ಮತ್ತು ಸಾವು ಎಂಬುದು ಸೃಷ್ಟಿಯ ಸಹಜ ಕ್ರಿಯೆಗಳಾಗಿವೆ. ಹಾಗೆಯೇ ಪ್ರಪಂಚದ ಮೇಲೆ ಜನಿಸಿದ ಯಾವ ಜೀವಕ್ಕಾಗಲೀ ಅದಕ್ಕೊಂದು ಅಂತ್ಯವಿರುತ್ತದೆ. ಪ್ರಾಣಿಗಿಂತ ಮನುಷ್ಯ ಎಲ್ಲಾ ವಿಧದಲ್ಲೂ ಭಿನ್ನವಾಗಿರುವುದರಿಂದ ಮನುಷ್ಯನು ಹುಟ್ಟಿನಿಂದ ಹಿಡಿದು ಸಾಯುವವರೆಗಿನ ಕ್ರಿಯೆಗಳನ್ನು ಗುರುತಿಸುವುದನ್ನು ಕಾಣುತ್ತೇವೆ. ಒಂದು ಮಗು ತಾಯಿಯ ಗರ್ಭದಿಂದ ಹೊರಬಂದಾಗ ಹಾಗೆಯೇ ಯೌವನಕ್ಕೆ ಬಂದಾಗ ಹಾಗೆಯೇ ಅವನು ಸತ್ತಾಗಲೂ, ಹಾಗೆಯೇ ಪ್ರತಿಯೊಂದು ಹಂತದಲ್ಲಿಯೂ ಒಂದಲ್ಲಾ ಒಂದು ರೀತಿಯ ಸಂಸ್ಕಾರಗಳು ನಡೆಯುತ್ತಲೇ ಇರುತ್ತವೆ.

ಕುಂಬಾರ ಜಾತಿಗೆ ಸೇರಿದ ಜನಾಂಗದಲ್ಲಿ ವ್ಯಕ್ತಿ ಮರಣಹೊಂದಿದ ಸಂದರ್ಭದಲ್ಲಿ ಕೆಲವು ಸಂಪ್ರದಾಯ ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿರುತ್ತದೆ. ಸತ್ತಂತಹ ವ್ಯಕ್ತಿಯನ್ನು ಮನೆಯ ಹೊರಕ್ಕೆ ಜಗಲಿ (ಪಡಸಾಲೆ)ಯಲ್ಲಿ ಪೂರ್ವಪಶ್ಚಿಮವಾಗಿ ಮಲಗಿಸಿ ಅನಂತರ ತಲೆಯ ಬಳಿ ನೀರನ್ನು ತುಂಬಿ ಹಣೆಗೆ, ದಾಸಯ್ಯನಾದರೆ ಅವನಿಗೆ ನಾಮವನ್ನು (ಕೆಂಪು, ಬಿಳಿ) ಧರಿಸುತ್ತಾರೆ. ಪಕ್ಕದಲ್ಲಿ ಆ ತನ್ನ ಹೆಂಡತಿ ಕುಳಿತಿರುತ್ತಾಳೆ. ಸಗಣಿ ಉಂಡೆಯನ್ನು ಮಾಡಿ ಅದರ ಮೇಲೆ ಮಣ್ಣಿನ ದೀಪವನ್ನು ಹಚ್ಚಿಡುತ್ತಾರೆ. ರಾತ್ರಿಯ ವೇಳೆಯಲ್ಲಿ ಸತ್ತರೆ ಆ ರಾತ್ರಿ ಭಜನೆ ಮಾಡಿ ಕಾಲಹರಣ ಮಾಡುತ್ತಾರೆ. ಕಾರಣ ಸತ್ತಂಥ ವ್ಯಕ್ತಿಯನ್ನು ಒಂಟಿಯಾಗಿ ಬಿಟ್ಟು ಮಲಗಿದರೆ ಆ ವ್ಯಕ್ತಿ ದೆವ್ವವಾಗುವುದೆಂಬ ನಂಬಿಕೆಯಿಂದ ಇಡೀ ರಾತ್ರಿ ಮಲಗದೇ ಬೆಂಕಿಯನ್ನು ಹಾಕಿಕೊಂಡು ಕಾಯುತ್ತಿದ್ದರು. ನಂತರ ತನ್ನ ಬಂಧು-ಬಳಗದವರೆಲ್ಲ ಬಂದ ನಂತರ ಆ ಶವಕ್ಕೆ ಸ್ನಾನ ಮಾಡಿಸಿದ ನಂತರ ಐದು ಮೀಟರ್ ಉದ್ದದ ಬಿಳಿಯ ಹೊಸ ವಸ್ತ್ರವನ್ನು ಹೊದಿಸುತ್ತಾರೆ. ತಲೆಗೆ ರುಮಾಲು ಸುತ್ತಿ ಹಣೆಗೆ ನಾಮ ಅಥವಾ ವಿಭೂತಿಯನ್ನು ಧರಿಸಿ ಪೂಜೆ ಮಾಡುತ್ತಾರೆ. ಈ ಕುಂಬಾರರಲ್ಲಿ 'ದಾಸಯ್ಯ'ರಾಗುವುದು ಹೆಚ್ಚು (ಗುಡ್ಡಪ್ಪ) ಅಂತವರಲ್ಲಿ ಸತ್ತರೆ, ಶವವನ್ನು ಮುಂದೆ

ಕುರ್ಚಿಯಲ್ಲಿ ಕೂರಿಸಿ, ಅಡುಗೆಯನ್ನು ಮಾಡಿ ಉಳಿದ 'ದಾಸಯ್ಯರು' ಪೂಜೆ ಮಾಡಿ, ಜಾಗಟೆ, ಶಂಖವನ್ನು ಘಂಟೆಯಿಂದ ಬಾರಿಸಿ, ಆ ಶವದ ಮುಂದೆ ಊಟವನ್ನು ಮಾಡುತ್ತಾರೆ. ಅನಂತರ ಶವಕ್ಕೆ ಎಲೆ, ಅಡಿಕೆ, ಕುಟ್ಟಿ ಬಾಯಿಗೆ ಹಾಕುವುದು ನಂತರ ಬಂದಂತಹ ಬಂಧು-ಬಳಗದವರು ಪೂಜೆಯನ್ನು ಮಾಡಿ ಅಂತಿಮ ನಮನವನ್ನು ಸಲ್ಲಿಸುತ್ತಾರೆ. ಇದಾದ ಬಳಿಕ ಸ್ಮಶಾನಕ್ಕೆ ಸಾಗಿಸಲು ಚಟ್ಟ ಅಥವಾ ಖುರ್ಚ್‌ನ್ನು ತಯಾರಿಸುತ್ತಾರೆ. ಇದನ್ನು ಹಸಿ ಬಿದುರುನಿಂದ ತಯಾರಿಸಿ, ತೆಂಗಿನಗರಿ, ನೆಲ್ಲುಹುಲ್ಲುಗಳನ್ನು ಹಾಕಿ ಈ ಚಟ್ಟವನ್ನು ಸಿದ್ಧಪಡಿಸುವರು. ಗುರುಹಿರಿಯರು - ಬಂಧುಬಳಗದವರು ಪೂಜೆ ಮಾಡಿ ತೆಂಗಿನಕಾಯಿ ಒಡೆದು ಅವರ ಕಾಲಿಗೆ ನಮಸ್ಕರಿಸಿ ಅನಂತರ ಶವವನ್ನು ಚಟ್ಟದ ಮೇಲೆ ಮಲಗಿಸುವರು. ದೇವರ ಪ್ರಾರ್ಥನೆಯೊಂದಿಗೆ (ಶ್ರೀಮತ್ ರಮಾರಮಣ, ಗೋವಿಂದಾ, ಗೋವಿಂದಾ) ಎನ್ನುತ್ತಾ ಸತ್ತವನ ಮಕ್ಕಳು ಭುಜವನ್ನು ಕೊಡಬೇಕು. ಹೆಣವನ್ನು ಸ್ಮಶಾನಕ್ಕೆ ಕೊಂಡೊಯ್ಯುವಾಗ ದಾರಿಯಲ್ಲಿ ಮಂಡಕ್ಕಿ, ವೀಳ್ಯದೆಲೆ ಚಿಲ್ಲರೆ ಬಿಡಿಗಾಸನ್ನು ಶವದ ಮೇಲೆ ಎಸೆಯುತ್ತ ಮುನ್ನಡೆಯುತ್ತಾರೆ. ಸ್ಮಶಾನವನ್ನು ಮುಟ್ಟುವುದಕ್ಕೆ ಮೊದಲು ಮೂರುದಾರಿ ಸೇರುವ ಮಧ್ಯದಲ್ಲಿ ನಿಲ್ಲಿಸುತ್ತಾರೆ. ಸತ್ತಂತಹ ವ್ಯಕ್ತಿಯನ್ನು ಹೂಳಲು ಗುಂಡಿಯನ್ನು ತೊಡಿಸುತ್ತಾರೆ. ಕೆಲವು ಬುಡಕಟ್ಟಿನವರು ಒಂದೊಂದು ರೀತಿಯಲ್ಲಿ ಸಂಸ್ಕಾರ ಮಾಡುತ್ತಾರೆ. ಕೆಲವರು ಹೂಳುತ್ತಾರೆ. ಇನ್ನೂ ಕೆಲವರು ಅಗ್ನಿ ಸ್ಪರ್ಶ ಮಾಡುತ್ತಾರೆ. ಹೂಳುವವರು ಗುಂಡಿಯನ್ನು ಆರು ಅಡಿ ಉದ್ದ ಎರಡುವರೆ ಅಡಿ ಅಗಲ ಮೂರು ಅಡಿ ಆಳದ ಗುಂಡಿಯನ್ನು ತೆಗೆದು ಅದರ ತಳಭಾಗದಲ್ಲಿ ಬಾಳೆಯ ಎಲೆಯನ್ನು ಹಾಕಿ ಶವವನ್ನು ಮಲಗಿಸುತ್ತಾರೆ.

ಹೀಗೆ ಶವವನ್ನು ಪೂಜಿಸಿ, ಗುಂಡಿಯನ್ನು ಪೂಜೆ ಮಾಡಿ ಹೊದಿಸಿದ ಬಟ್ಟೆಯನ್ನು ತೆಗೆದು ಶವವನ್ನು ಗುಂಡಿಯೊಳಕ್ಕೆ ಮಲಗಿಸಿ ತಲೆಯ ಕಡೆ ಒಂದು ಒಣಗಿದ ತೆಂಗಿನಕಾಯಿ ಇಟ್ಟು ಬಂದಂತಹವರೆಲ್ಲ ಮೂರು ಬೊಗಸೆ ಮಣ್ಣನ್ನು ಪಾದದ ಕಡೆಯಿಂದ ಹಾಕುತ್ತಾರೆ. ನಂತರ ಗುದ್ದಲಿಯಿಂದ ಆ ಗುಂಡಿ ತುಂಬಾ ಮಣ್ಣನ್ನು ಎಳೆದು 'ಸಮಾಧಿ'ಯನ್ನು ನಿರ್ಮಿಸುತ್ತಾರೆ. ಆ ಸಮಾಧಿಯ ಮೇಲೆ ಶವದ ಮೇಲಿದ್ದ ಹೂವನ್ನು ತಂದು ಹಾಕುವರು. ಅಂತಿಮವಾಗಿ ಶವವನ್ನು ಹೂಳಿದ ಮೇಲೆ ಬಂದವರೆಲ್ಲಾ ಕೈಕಾಲು ತೊಳೆದು ಎಲೆ, ಅಡಿಕೆಯನ್ನು ಸಂಬಂಧಿಕರಿಗೆ ಕೊಟ್ಟು ನಮ್ಮ ಸಂಬಂಧ ಸತ್ತ ವ್ಯಕ್ತಿಯೊಂದಿಗೆ ಕೊನೆಗೊಳ್ಳದೆ ಮುಂದುವರೆಯುತ್ತಾ ಹೋಗಲಿ ಎಂಬ ನಂಬಿಕೆಯಿಂದ ತಾಂಬೂಲವನ್ನು ಹಂಚುತ್ತಾರೆ ಹಾಗೂ ಶವವನ್ನು ಸ್ಮಶಾನಕ್ಕೆ ಕೊಂಡೊಯ್ದು ತಕ್ಷಣ ಮನೆಯ ಮುಂದೆ ಸ್ವಚ್ಛಮಾಡಿ, ಮನೆಯಲ್ಲಿ ಯಾವುದೇ

ನೀರಾಗಲಿ, ಆಹಾರವಾಗಲೀ ಇಲ್ಲದಂತೆ ಖಾಲಿಮಾಡಿ ಕಸವನ್ನು ತೆಗೆದು ಮನೆಯ ಅಂಗಳಕ್ಕೆ ಸಗಣಿಯಿಂದ ನೀರುಹಾಕಿ, ತುಂಬಿದ ಗಡಿಗೆಯಲ್ಲಿ ನೀರು ಇಟ್ಟು ಹೊರಗಡೆ ಇಡುತ್ತಾರೆ. ಹಾಗೆ ಒಂದು ದೀಪವನ್ನು ಹಚ್ಚಿರುತ್ತಾರೆ. ಈ ದೀಪವನ್ನು ಶವವನ್ನು ಸಂಸ್ಕಾರ ಮಾಡಿದ ನಂತರ ಆ ದೀಪಕ್ಕೆ ಕೈಮುಗಿದು ನಂತರ ಅವರವರ ಸ್ಥಳಕ್ಕೆ ವಾಪಸ್ಸು ಹೋಗುತ್ತಾರೆ. ನಂತರ ಆ ದೀಪವು ಸುಮಾರು ಹನ್ನೊಂದು ದಿವಸದ ತನಕ ಉರಿಯುತ್ತಿರುತ್ತದೆ. ಆ ದಿವಸ ಮನೆಯನ್ನು ಸ್ವಚ್ಛಮಾಡಿ ಶುಚಿಯಾದ ಮೇಲೆ ಅಗಸರು ಮನೆಗೆ ಬಂದು ಗೋಮೂತ್ರವನ್ನು ಹಾಕುತ್ತಾರೆ. ಅಲ್ಲಿಗೆ ಸೂತಕ ಕಳೆಯಿತು ಎಂಬ ನಂಬಿಕೆ. ನಂತರ ತಿಂಡಿಪದಾರ್ಥಗಳನ್ನು ತಯಾರಿಸಿ ಸಮಾಧಿಯ ಬಳಿ ಬಂದು ಒಂದು ಬಾಳೆ ಎಲೆಯನ್ನು ಹಾಸಿ ಮಾಡಿದ ಪದಾರ್ಥವನ್ನೆಲ್ಲ ತಂದು ಮಡಿಯಿಂದ ಎಡೆಯನ್ನು ಹಾಕುವರು. ಮಕ್ಕಳಲ್ಲಿ ಯಾರಾದರೂ ಒಬ್ಬನಿಗೆ ತಲೆಯನ್ನು (ಮಂಡೆ) ಬೋಳಿಸಿ ಅವನ ಕೈಯಲ್ಲಿ ಪೂಜೆ ಮಾಡಿಸುವರು. ನಂತರ ಬಂದಂತಹ ಜನರು ಹಾಲು–ತುಪ್ಪವನ್ನು ಎರೆಯುವರು. ಇದೇ ಸಮಯದಲ್ಲಿ ಸತ್ತಂತಹ ವ್ಯಕ್ತಿಯ ಹೆಂಡತಿಯ ಬಳೆಯನ್ನು ಒಡಿಸುತ್ತಾರೆ. ಎಡೆಯನ್ನು ಹಾಕಿದ ಬಳಿಕ ಕಾಗೆ–ಪಕ್ಷಿಗಳು ಬಂದು ತಿಂದನಂತರ ಪೂಜೆಯನ್ನು ಮಾಡಿ, ನಂತರ ಅದೇ ಪ್ರಸಾದವೆಂದು ತಿನ್ನುವರು. ಮತ್ತೊಂದು ನಂಬಿಕೆಯೆಂದರೆ ಕಾಗೆ–ಪಕ್ಷಿಗಳು ಆ ಎಡೆಯನ್ನು ತಿನ್ನದೆ ಇದ್ದ ಪಕ್ಷದಲ್ಲಿ ಅವನು ಒಳ್ಳೆಯವನ್ನಲ್ಲ ಎಂಬ ಭಾವನೆ ಆ ಸಮುದಾಯದ ಜನರಲ್ಲಿತ್ತು. ತಾನು ಬದುಕಿದಾಗ ಯಾರಿಗೂ ಸಹಾಯವನ್ನು ಮಾಡದೆ ಇದ್ದಾನೆಂದು ನಂಬಿಕೆಯಿಂದ ಆ ಅನ್ನವನ್ನೆಲ್ಲ ಹಸಿರು ಗಿಡದ ಬುಡಕ್ಕೆ ಹಾಕುವರು. ಇದಕ್ಕೆ 'ಕೂಳು' ಹಾಕುವ ಪದ್ಧತಿಯೆಂದು ಕರೆಯುತ್ತಾರೆ.

ಈ ಜಾತಿಯವರಲ್ಲಿ ಗಂಡು ಅಥವಾ ಹೆಂಗಸು ಮನೆಯ ಒಳಗಡೆ ಸತ್ತೆ ಆ ಮನೆಯವರು ಮೂರು ತಿಂಗಳವರೆಗೆ ಮನೆಯನ್ನು ಬಿಡಬೇಕೆಂಬ ನಂಬಿಕೆ ಸಂಪ್ರದಾಯವಿದೆ. ಈ ಆಚರಣೆ ಈಗಲೂ ಮುಂದುವರೆಸಿಕೊಂಡು ಕೆಲವು ಮನೆತನದವರು ಬಂದಿದ್ದಾರೆ. ಹೀಗೆ ಕುಂಬಾರರ ಜಾತಿಯಲ್ಲಿ ವಿವಿಧ ರೀತಿಯ ಮರಣದ ನಂಬಿಕೆ ಮತ್ತು ಸಂಪ್ರದಾಯಗಳನ್ನು ನಾವು ಕಾಣಬಹುದು.

**ನಿಷೇಧಗಳು:**

ಉಪಾಸನೆಯ ಸಂದರ್ಭದಲ್ಲಿ ಕೆಲವು ವಸ್ತುಗಳನ್ನು ಕೆಲವರು ವ್ಯಕ್ತಿಗಳನ್ನು ಮುಟ್ಟುವಂತಿಲ್ಲ. ಕೆಲವು ಆಹಾರಪದಾರ್ಥಗಳನ್ನು ಕೆಲವು ಪಾನೀಯಗಳನ್ನು ಸೇವಿಸುವಂತಿಲ್ಲ. ಈ ವರ್ತನೆ ಮತ್ತು ನಂಬಿಕೆಗಳನ್ನು ನಿಷೇಧಗಳೆಂದು ಕರೆಯುತ್ತಾರೆ.

ಯಾವುದೇ ಜಾತಿ, ಜನರನ್ನು ತೆಗೆದುಕೊಂಡರು ಸಹ ಅವರಲ್ಲಿ ಕೆಲವು ನಿಷೇಧಗಳಿರುತ್ತವೆ. ಆದರೆ ಕುಂಬಾರರ ಸಂಸ್ಕೃತಿಯನ್ನು ನಾವು ಅವಲೋಕಿಸಿದಾಗ ಇವರ ನಿಷೇಧಗಳು ಬೇರೆಯೇ ರೀತಿಯಲ್ಲಿ ನಾವು ಕಾಣುತ್ತೇವೆ. ತಾವು ಕಸುಬು ಮಾಡುವ ಆವಿಗೆಯ ಬಳಿ ಹರಿಜನರನ್ನು ಸೇರಿಸುವುದಿಲ್ಲ. ಮನೆಯ ಒಳಕ್ಕೆ ಅವರನ್ನು ಸೇರಿಸುವುದಿಲ್ಲ. ಆವಿಗೆಯ ಬಳಿ ಹಂದಿಯನ್ನು ಬಿಟ್ಟುಕೊಡುವುದಿಲ್ಲ. ಇವರು ಮಾಂಸಾಹಾರಿಯಾಗಿದ್ದರು. ಕುರಿ, ಕೋಳಿ, ಮೀನು, ಮೇಕೆಯನ್ನು ತಿನ್ನುವರು. ಹಂದಿಮಾಂಸವನ್ನು ಇವರು ಸೇವಿಸುವುದಿಲ್ಲ. ಆವಿಗೆಯ ಬಳಿ ಚಪ್ಪಲಿಯನ್ನು ಧರಿಸುವಂತಿಲ್ಲ. ಜೊತೆಗೆ ತಿಗುರಿ (ಚಕ್ರ) ತಿರುವಾಗಲೂ ಸಹ ಹಾಕಿಕೊಳ್ಳುವುದಿಲ್ಲ. ಈ ಜನಾಂಗದ ಜನರು ತಮ್ಮದೇ ಆದ ನಂಬಿಕೆಗಳು ಇವೆ. ಆವಿಗೆ ಮತ್ತು ತಿಗುರಿಗಳನ್ನು ತಮ್ಮ ದೇವರೆಂದು ಭಾವಿಸಿರುವುದರಿಂದ ಅದೇ ಅವರ ಸಂಪತ್ತು. ಆದ್ದರಿಂದ ಇಂದಿಗೂ ಅಂತಹ ನಂಬಿಕೆ ಸಂಪ್ರದಾಯಗಳಿವೆ. ಸತ್ತವರ ಮನೆಯಲ್ಲಿ ಊಟವನ್ನು ಮಾಡುವುದಿಲ್ಲ. ಆವಿಗೆಯ ತಿಗುರಿಯ ಕೋಲನ್ನು ಕುಂಬಾರಿಕೆಯ ಚಕ್ರವನ್ನು ಕಾಲಿನಿಂದ ಒದೆಯಬಾರದು. ಚಪ್ಪಲಿಯಿಂದ ಹೊಡೆಸಿಕೊಂಡರೆ ಅವರು ಶುದ್ಧಿಯಾಗಬೇಕು. ಒಂದು ವೇಳೆ ಹಾಗೆ ಮಾಡಿದರೆ ಅವರಿಗೆ ದಂಡವನ್ನು ಹಾಕುತ್ತಾರೆ. ಅದರ ಜೊತೆಗೆ ಕೆಲವು ದಿನಗಳವರೆಗೆ ಈ ರೀತಿಯ ತಪ್ಪುಗಳನ್ನು ಮಾಡಿದ ವ್ಯಕ್ತಿಯನ್ನು ಕುಲದಿಂದ ಹೊರಹಾಕುತ್ತಾರೆ. ಕುಲದ ಒಳಕ್ಕೆ ಬರಬೇಕಾದರೆ ದಂಡವನ್ನು ಕೊಟ್ಟು ಅವನು ಕುಲಕ್ಕೆ ಸೇರಿಕೊಳ್ಳಬೇಕು. ಚಪ್ಪಲಿಯಿಂದ ಹೊಡೆಸಿಕೊಂಡವನು ತಲೆಯನ್ನು ಬೋಳಿಸಿಕೊಂಡು ಹೊಸಬಟ್ಟೆಯನ್ನು ಧರಿಸಬೇಕು. ಪೂಜಾರಿಯಿಂದ ಚಿನ್ನದ ಮತ್ತು ಬೆಳ್ಳಿಯ ಕಡ್ಡಿಯಿಂದ ನಾಲಗೆಯನ್ನು ಸುಡಿಸುತ್ತಾರೆ. ಅನಂತರ ಕುಲದ ಜನರಿಗೆ ಊಟವನ್ನು ಹಾಕಿಸಬೇಕು. ಕುಂಬಾರರಲ್ಲಿ ಋತುಮತಿಯಾದವರು, ಮುಟ್ಟಾದವರು, ಕಸುಬು ಮಾಡುವ ಸ್ಥಳಗಳಲ್ಲಿ ಇವರು ತಿರುಗಾಡುತ್ತಿರಲಿಲ್ಲ. ಹೀಗೆ ಕುಂಬಾರರ ನಿಷೇಧಗಳು ನಂಬಿಕೆಗಳನ್ನು ಬಹಳ ಪ್ರಬಲವಾಗಿ ಆಚರಿಸುತ್ತಿದ್ದರು ಎಂದು ತಿಳಿಯಬಹುದು.

**ಕುಂಬಾರರ ಆಡಳಿತ ವ್ಯವಸ್ಥೆ:**

ಭಾರತ ದೇಶವು ಹಳ್ಳಿಗಳ ನಾಡು ಈ ಹಳ್ಳಿಗಳಲ್ಲಿ ತಮ್ಮದೇ ಆದ ಆಡಳಿತ ವ್ಯವಸ್ಥೆಯನ್ನು ನಾವು ಕಾಣುತ್ತೇವೆ. ಗ್ರಾಮಮುಖಂಡರುಗಳು, ಯಜಮಾನರುಗಳು ಗ್ರಾಮದೇವತೆಯ ಪೂಜಾರಿಗಳು, ಗ್ರಾಮಪಂಚಾಯಿತಿಯ ಸದಸ್ಯರುಗಳು ಮುಖ್ಯ ಆಡಳಿತಗಾರರಾಗಿರುತ್ತಾರೆ. ಇವರುಗಳು ಗ್ರಾಮದ ಪ್ರತಿಯೊಂದು ಸಮಸ್ಯೆಯನ್ನು

ಬಗೆಹರಿಸುತ್ತಾ ಊರಿನ ಆಗುಹೋಗುಗಳ ಜವಾಬ್ದಾರಿ ಹೊಂದಿರುತ್ತಾರೆ. ಪ್ರತಿಯೊಂದು ಗ್ರಾಮದಲ್ಲಿ ಸೌಹಾರ್ದತೆ ಇರುತ್ತದೆ. ಕೆಲವೊಮ್ಮೆ ದ್ವೇಷ, ಅಸೂಯೆಗಳ ಸಾಧನೆ ನ್ಯಾಯವನ್ನು ಮೀರಿಸುವಂತಹ ಘಟನೆಗಳು ಇದ್ದೆ ಇರುತ್ತವೆ. ಕುಂಬಾರರು ವಾಸಿಸುವ ತಮ್ಮ ಊರುಗಳಲ್ಲಿ ತಮ್ಮ ಮನೆತನಗಳಲ್ಲಿ, ಜನಾಂಗಗಳಲ್ಲಿ ಉಂಟಾಗುವ ಯಾವುದೇ ಸಮಸ್ಯೆಗಳನ್ನು ಈ ಜನಾಂಗದ ಯಜಮಾನನೇ ಬಗೆಹರಿಸುತ್ತಾನೆ. ಆ ಸಮಸ್ಯೆಯನ್ನು ಬಗೆಹರಿಸಿ ಯಜಮಾನರುಗಳು ಕೂಲಂಕಷವಾಗಿ ಪರಿಶೀಲಿಸಿ ಅದಕ್ಕೆ ತಕ್ಕ ತೀರ್ಪನ್ನು ಕೊಡುತ್ತಾರೆ. ಅದೇ ಅಂತಿಮ ತೀರ್ಮಾನವಾಗಿರುತ್ತದೆ. ಮುಂದೆ ತಪ್ಪಿತಸ್ಥನಾದವನು ಆ ತೀರ್ಪುಗಾರರು ವಿಧಿಸಿದ ಎಲ್ಲಾ ದಂಡವನ್ನು ಒಪ್ಪಿಕೊಂಡು ಅದಕ್ಕೆ ತಲೆಬಾಗಿ ಆ ತೀರ್ಪಿಗೆ ತಕ್ಕಂತೆ ನಡೆದುಕೊಂಡರೆ ಅವನನ್ನು ನಿರಪರಾಧಿ ಎಂದು ತೀರ್ಮಾನಿಸಿ ಎಲ್ಲರಂತೆ ಅವನನ್ನು ನೋಡುತ್ತಾರೆ. ಆ ನಿಯಮಗಳನ್ನು ಪಾಲಿಸದಿದ್ದರೆ ಯಾವುದೇ ಕಾರಣಕ್ಕೂ ಅವನನ್ನು ತಮ್ಮ ಕುಲಕ್ಕೆ ಸೇರಿಸಿಕೊಳ್ಳುವುದಿಲ್ಲ. ಯಾವುದೇ ಹಬ್ಬ, ಜಾತ್ರೆ, ಮದುವೆ ಮುಂತಾದ ಕಾರ್ಯಗಳಿಂದ ಅವರನ್ನು ದೂರವಿರಿಸುತ್ತಾರೆ. ಇಂದಿಗೂ ಸಹ ಕೆಲವಾರು ಕುಂಬಾರರ ಜಾತಿಯಲ್ಲಿ ಈ ಪದ್ಧತಿಯನ್ನು ಅನುಸರಿಸಿಕೊಂಡು ಬರುತ್ತಿರುವುದನ್ನು ಕಾಣುತ್ತೇವೆ.

ಕುಂಬಾರ ವೃತ್ತಿಯು ನಿರಂತರವಾಗಿ ನಡೆಯುವ ಕಸುಬಾಗಿದ್ದರೂ ಅದನ್ನು ವ್ಯವಸಾಯಕ್ಕೆ ಭೂಮಿಯನ್ನಾಗಿ ಮಾಡಿಕೊಂಡು ಕೃಷಿಯನ್ನು ಮಾಡುತ್ತಾ ಜೀವನಕ್ಕೆ ಅವಶ್ಯಕವಾದ ಬೆಳೆಗಳನ್ನು ಬೆಳೆಯುತ್ತಾ ಜೀವನವನ್ನು ಮಾಡುತ್ತಿರುವುದಾಗಿ ತಿಳಿದುಬರುತ್ತದೆ. ಏಕೆಂದರೆ ಮಳೆಗಾಲದಲ್ಲಿ ಅವರಿಗೆ ಕುಂಬಾರಿಕೆಗೆ ಬೇಕಾದ ಕಟ್ಟಿಗೆಯ ಅಭಾವವಿರುವುದರಿಂದ ಅವರು ಮಳೆಗಾಲದಲ್ಲಿ ಅಷ್ಟೇನು ಮಡಿಕೆಗಳನ್ನು ಮಾಡುವುದಿಲ್ಲ. ಈ ಸಂದರ್ಭದಲ್ಲಿ ಬೇರೆ ಬೇರೆ ಕಸುಬುಗಳನ್ನು ಮಾಡುತ್ತಾರೆ.

ಕುಂಬಾರನು ಈ ಕಸುಬುಗಳ ಜೊತೆಗೆ, ಕುರಿ, ಮೇಕೆಗಳ ಜೊತೆಗೆ ಕೆಲವು ಮನೆತನದವರು ದನಗಳನ್ನು ಸಾಕಿದ್ದಾರೆ. ಎಮ್ಮೆ, ಹಸುಗಳಿಂದ ಹಾಲನ್ನು ಕರೆದು ಮಾರಿ ಜೀವಿಸುವರು ಇದ್ದಾರೆ. ಇನ್ನೂ ಕೆಲವು ಮನೆತನದವರು ವ್ಯವಸಾಯವನ್ನು ತಮ್ಮ ಕಸುಬನ್ನಾಗಿಯೂ ಮಾಡಿಕೊಂಡು ಅದರಿಂದ ಬಂದಂತಹ ಬೆಳೆಯಿಂದ ಜೀವನವನ್ನು ಸಾಗಿಸುತ್ತಾರೆ. ಕೆಲವರಿಗೆ ನೀರಾವರಿ ಜಮೀನು ಇರಬಹುದು. ಇನ್ನೂ ಕೆಲವರಿಗೆ ಬಂಜರು ಭೂಮಿ ಇರಬಹುದು. ನೀರಾವರಿ ಭೂಮಿಯಲ್ಲಿ ಕಬ್ಬು, ರಾಗಿ, ಟಮೋಟೊ, ಬದನೆ, ಬೀನಿಸು ಈ ತರಹದ ಬೆಳೆಯನ್ನು ಬೆಳೆದರೆ ಇನ್ನೂ ಬಂಜರು ಭೂಮಿಯವರು ಮಳೆಗಾಲದಲ್ಲಿ ಜೋಳ, ರಾಗಿ, ಹುರುಳಿ, ಹತ್ತಿ, ಕಡಲೆಕಾಯಿ ಈ ತರಹದ ಬೆಳೆಯನ್ನು ಬೆಳೆಯುತ್ತಾರೆ. ಹೆಂಗಸರು ಕೆಲವರು ಕೂಲಿ ಕೆಲಸಕ್ಕೆ ಕೈ

ಹಾಕುವರು. ನಾಟಿಹಾಕುವುದು, ಕಳೆಕೀಳುವುದು, ಇನ್ನಿತರ ಕೆಲಸಕ್ಕೆ ಹೋಗುತ್ತಾರೆ. ಇಲ್ಲದಿದ್ದರೆ ಅವರ ಜೀವನವು ತುಂಬಾ ಕಷ್ಟಕರವಾಗಬೇಕಾಗಿತ್ತು.

ಕುಂಬಾರರ ಜನಸಂಖ್ಯೆ ಹೆಚ್ಚಿದಂತೆಲ್ಲಾ ಪ್ರತ್ಯೇಕವಾದ ಮನೆಗಳನ್ನು ಕಟ್ಟಿಕೊಂಡು ಜೊತೆಗೆ ಕಷ್ಟಪಟ್ಟು ದುಡಿದು ಸಂತೃಪ್ತಿ ಜೀವನ ನಡೆಸಬೇಕೆಂಬುದೇ ಇವರ ಉದ್ದೇಶವಾಗಿದ್ದು ಅದರಿಂದ ಜೀವನ ಸಾಗಿಸುತ್ತಿದ್ದಾರೆ. ಕುಂಬಾರರ ಸ್ತ್ರೀಯರು ಸಹ ತಮ್ಮ ಗ್ರಾಮದಲ್ಲಿ ಸ್ವಸಹಾಯ ಸಂಘವನ್ನು ಸ್ಥಾಪಿಸಿದ್ದು ಪ್ರತಿವಾರವು ಸಂಘವನ್ನು ನಡೆಸಿಕೊಂಡು ಆರ್ಥಿಕ ಜೀವನವನ್ನು ಉತ್ತಮಪಡಿಸಿಕೊಳ್ಳುತ್ತಾರೆ. ಸಹಕಾರ ಬ್ಯಾಂಕಿನಿಂದ ಸಾಲಸೌಲಭ್ಯ ಪಡೆದು ಹಸು, ಎಮ್ಮೆ, ಕುರಿ, ಮೇಕೆ ಇತ್ಯಾದಿ ಸಾಕುಪ್ರಾಣಿಗಳನ್ನು ತೆಗೆದುಕೊಂಡು ಸಾಕುತ್ತಿರುವುದನ್ನು ಕಾಣಬಹುದು. ಕುಂಬಾರರ ಹಿಂದಿನ ಆರ್ಥಿಕ ಸ್ಥಿತಿಗತಿಗಳನ್ನು ನೋಡಿದರೆ ಇಂದೂ ಯಾವುದೇ ಸಾಲಸೌಲಭ್ಯಗಳು ಇರುತ್ತಿರಲಿಲ್ಲ. ಇಂದು ಕುಂಬಾರರಿಗೆ ಆರ್ಥಿಕ ಸೌಲಭ್ಯವಿರುವುದರಿಂದ ಸ್ವಲ್ಪ ಉತ್ತಮ ಜೀವನ ನಡೆಸುತ್ತಾ ಬಂದಿರುತ್ತಾರೆ. ಕುಂಬಾರರ ಜನಸಂಖ್ಯೆ ಇತರ ಜಾತಿಗಳಿಗಿಂತ ತುಂಬಾ ಕಡಿಮೆ ಜನಸಂಖ್ಯೆಯನ್ನು ಕೆಲವು ಕುಂಬಾರರು ಶಿಕ್ಷಣದಲ್ಲಿ ಸ್ವಲ್ಪ ಕಡಿಮೆಯೆ ಎಂದು ಹೇಳಬಹುದು. ಕುಂಬಾರರ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವ ಬದಲು ತಮ್ಮ ವೃತ್ತಿಕಾರ್ಯದಲ್ಲಿ ಇನ್ನಿತರ ಕೆಲಸಕಾರ್ಯಗಳಿಗೆ ಮುಂದುವರೆಯಲು ಹೇಳುತ್ತಾರೆ. ಕುಂಬಾರರಲ್ಲಿ ವಿದ್ಯಾವಂತರ ಸಂಖ್ಯೆ ತುಂಬಾ ಕಡಿಮೆ ಇದ್ದು ಗಂಡು ಹುಡುಗರು ಓದಿದ್ದಾರೆಯೇ ಹೊರತು ಹೆಣ್ಣುಮಕ್ಕಳಿಗೆ ಅಕ್ಷರದ ಜ್ಞಾನದ ಕೊರತೆ ಕಡಿಮೆ ಎಂದು ಅಧ್ಯಯನದಿಂದ ತಿಳಿದುಬಂದಿದೆ.

## ಕೃಷಿಕ-ಕುಂಬಾರರು

ಜನಪದ ಆಯಗಾರರೆಂದರೆ ಗ್ರಾಮೀಣ ಪದ್ಧತಿಯಲ್ಲಿ ಒಕ್ಕಲುತನದ ವೃತ್ತಿಯಲ್ಲಿ ನೆರವಾಗುವ ಕುಂಬಾರರು ಮತ್ತು ಬಡಿಗರು ಮಾತ್ರ. ಹಳ್ಳಿಯ ಸಂಪ್ರದಾಯ ಜಾತ್ರೆ ಉತ್ಸವದಲ್ಲಿ ಇವರ ಸೇವೆ ನಿರಂತರ. ಒಕ್ಕಲುತನಕ್ಕೆ ಸಂಬಂಧಿಸಿದ ಹಬ್ಬ ಹುಣ್ಣಿಮೆ, ಬಿತ್ತನೆ, ರಾಶಿಯ ಸಂದರ್ಭದಲ್ಲಿ ಇವರಿಗೆ ಬಾಜಿಗಳುಂಟು. ಹಳ್ಳಿಯ ಆಯಗಾರರೆಂದರೆ ಒಕ್ಕಲಿಗ ವರುಷಕ್ಕೊಮ್ಮೆ ಬೆಳೆಯುವ ಬೆಳೆ ಕಾಳುಕಡ್ಡಿಯನ್ನು, ದಾನರೂಪವಾಗಿ ಪಡೆದು ಭೂಮಿಯ ಆದಾಯದ ಮೇಲೆಯೇ ಜೀವನ ಸಾಗಿಸುವ ಜನ. ಇವರು ಪಡೆಯುವ 'ಆಯಾ' ಒಂದು ಕರಾರು ಅಥವಾ ಕೂಲಿ ಅಲ್ಲ. ಅದೊಂದು ಬಗೆಯ ಗ್ರಾಮೀಣ ಪರಂಪರೆಯಾಗಿ ಬಂದ ಆರ್ಥಿಕ ನೀತಿ ಪರಸ್ಪರರಲ್ಲಿ ಬೆಳೆದುಬಂದ ಒಂದು ಬಗೆಯ ಧಾರ್ಮಿಕ ಮನೋಭಾವ. ಈ ಪದ್ಧತಿ ನಮ್ಮ ಜನಪದ ಜೀವನದಲ್ಲಿ ಯಾವ ಜಾತಿಯ ಪರಿಕಲ್ಪನೆಗೂ ಒಳಗಾದಂತೆ ಧಾರ್ಮಿಕ,

ಆರ್ಥಿಕ, ಸಾಮಾಜಿಕ, ಸೌಹಾರ್ದ ಸಂಬಂಧಗಳನ್ನು ಬಹುಹಿಂದಿನಿಂದಲೂ ಕಾಣುತ್ತೇವೆ.

'ಮಡಿಕೆಯ ಮಾಡುವರೇ ಮಣ್ಣೇ ಮೊದಲು' – ಎಂದು ಬಸವಣ್ಣನವರು ನುಡಿದಿರುವಲ್ಲಿ ಇವರ ಉದ್ಯೋಗ ಸೂಚನೆ ಇದೆ. ಹಳ್ಳಿಯ ಜನ ಜೀವನದಲ್ಲಿ ತೀರ ನಿಕಟವಾಗಿ ಅಲ್ಲಿನ ಮಣ್ಣನ್ನೇ ಕೆಸರು ಮಾಡಿ ತುಳಿದು ಗಡಿಗೆ ಮಡಿಕೆಗಳನ್ನು ಮಾಡುವ ಕುಂಬಾರಿಕೆ ಒಂದರ್ಥದಲ್ಲಿ ಲೌಕಿಕ ಪಾರಮಾರ್ಥಕವೆರಡರ ಜೀವನ ಸೂತ್ರಕ್ಕೆ ಹಿಡಿದ ಕನ್ನಡಿಯಾಗಿದೆ. ಒಕ್ಕಲಿಗರು ಹೇಳುವ ಹಲವಾರು ಜನಪದ ಗಾಳಿಯ ಹೆಸರುಗಳಲ್ಲಿ ಕುಂಬಾರ ಗಾಳಿಯು ಸಹ ಒಂದು ಕುಂಬಾರ ಗಾಳಿಗಳು ಬೀಸಿದರೆ ಬೆಳೆಗಳು ಕೆಡುವವೆಂದು ಹೇಳುವುದನ್ನು ಗಮನಿಸಬಹುದು. ಕುಂಬಾರನು ಒಕ್ಕಲಿಗರಿಗೆ ಬೇಕಾಗುವ ಮಣ್ಣಿನ ಪಾತ್ರೆಗಳನ್ನು ಒದಗಿಸುವನು. ಇತ್ತೀಚಿನ ದಿನಗಳಲ್ಲಿ ಅತ್ಯಾಧುನಿಕ ಅಂಗಡಿಗಳಲ್ಲಿ ಕೆಲಸಮಾಡುವ ಶೋರೂಮ್‌ಗಳಲ್ಲಿನ ಪೀಠೋಪಕರಣಗಳ ತಯಾರಕರು ಡೈನಿಂಗ್ ಟೇಬಲ್, ಛೇರ್‌ಗಳ ಕೆಲಸಗಾರರು ಕಬ್ಬಿಣದ ಕಪಾಟು ಕುರ್ಚಿ ಮೇಜು–ಗಳನ್ನು ನಿರ್ಮಿಸುವ ಕಮ್ಮಾರರು, ಸಿದ್ದ ಪಾದರಕ್ಷೆಗಳನ್ನು ನಗರಗಳಲ್ಲಿ ರಚಿಸುವ ಚಮ್ಮಾರರು, ಜನಪದ ಆಯಗಾರರಲ್ಲಿ ಅವರು ಹಣದ ವ್ಯಾಪಾರಕ್ಕಾಗಿ ಮಾಡುವ ವ್ಯಾಪಾರ.

# ಅಧ್ಯಾಯ – ೪

# ಮಡಿಕೆ ತಯಾರಿಕೆಯ ವಿಧಾನಗಳು

## ಮಣ್ಣುತರುವ ವಿಧಾನ:

ಕುಂಬಾರಿಕೆಯ ವೃತ್ತಿಗೆ ಮುಖ್ಯವಾಗಿ ಬೇಕಾದುದು 'ಜೇಡಿಮಣ್ಣು' ಅದನ್ನು ತರುವ ಸಲುವಾಗಿ ಕುಂಬಾರರು ಕೆರೆಗೆ ಹೋಗುತ್ತಾರೆ. ಅಲ್ಲಿ ತಮ್ಮ ಅನುಭವದಿಂದ ಸರಿಯಾದ ಸ್ಥಳಕ್ಕೆ ಹುಡುಕಿಕೊಂಡು ಹೋಗುತ್ತಾರೆ. ಕೆರೆಗೆ ಹೊಸದಾಗಿ ನೀರು ಹರಿದು ಬರುವಾಗಲೆಲ್ಲ ಅದರೊಂದಿಗೆ ಕೂಡಿಬರುವ ಹೊಸಮಣ್ಣಿನೊಂದಿಗೆ ಕಸ, ಕಡ್ಡಿ, ಕಲ್ಲುಚೂರುಗಳು ಬೆರೆತಿರುತ್ತವೆ. ಹೊಸದಾಗಿ ಬರುವ ಕಲುಷಿತವಾದ ಮಣ್ಣಿನ ಪದರಗಳು ಒಂದರ ಮೇಲೊಂದು ಸೇರುತ್ತಾ ಬೆಳೆಯುತ್ತಾ ಹೋಗುತ್ತವೆ. ಹೀಗೆ ಹಲವಾರು ಪದರಗಳು ಹಾಗೂ ಮೇಲುಭಾಗದ ಮಣ್ಣಿನಲ್ಲಿ ಹುಲ್ಲಿನ ಬೀಜ, ಗರಿಕೆಬೇರು, ಕುರಿ ಪಿಚ್ಚಗೆ (ಹಿಕ್ಕೆ) ದನಕರುಗಳ ಸಗಣಿ, ಇತರ ಪ್ರಾಣಿಗಳ ಮಲಮೂತ್ರ, ದಪ್ಪ ಮರಳಿನ ಕಣಗಳು, ಪಕ್ಷಿಗಳ ಹಿಕ್ಕೆ, ರಾಗಿಕಾಳು, ಭತ್ತ ಅಲ್ಲದೆ ಕಪ್ಪೆ, ಏಡಿ, ಮೀನು ಮೊದಲಾದವುಗಳು ಹಾಗೂ ಕೆಲವು ಜಲಚರಗಳ ಆಸ್ತಿಪಂಜರಗಳಿರುವುದರಿಂದ, ಸುಮಾರು ಎರಡು ಅಥವಾ ಮೂರು ಅಡಿ ಆಳದವರೆಗಿನ ಮಣ್ಣಿನ ಪದರಗಳನ್ನು ತೆಗೆದುಹಾಕಿದ ನಂತರ ಕುಂಬಾರಿಕೆಯ ಉಪಯೋಗಕ್ಕೆ ಬರುವ ಜೇಡಿಮಣ್ಣು ದೊರೆಯುತ್ತದೆ. ಈ ಮಣ್ಣನ್ನು ಸೋಸುತ್ತಾರೆ. ಹೀಗೆ ಒಂದೆರಡು ಜಾಗದಲ್ಲಿ ಸೋಸುವುದರಿಂದ ಕೆಂಪು ಗೋಡಾಗಲಿ, ನುಣ್ಣೆ ಮಣ್ಣು (ನುಣುಪಾದ ಮಣ್ಣು) ಇಲ್ಲದೇ ಕರೇಗೋಡು (ಕಪ್ಪುಮಣ್ಣು) ದೊರಕುತ್ತದೆ. ಅವರು ಅದನ್ನು ಅಗೆದು ಕುಂಬಾರ ಸಾಲೆಗೆ (ಮಡಕೆ ಮಾಡುವ ಜಾಗ) ಅಥವಾ ಮನೆಗೆ ಸಾಗಿಸುತ್ತಾರೆ.

## ಮಣ್ಣು ಹದಗೊಳಿಸುವ ಕ್ರಮ:



ಕುಂಬಾರರು ಕೆರೆಯಿಂದ ತಂದ ಜೇಡಿಮಣ್ಣನ್ನು ಮನೆಯ ಮುಂಭಾಗ ಅಥವಾ ಕುಂಬಾರರ ಸಾಲೆಯಲ್ಲಾಗಲಿ ಹಾಕಬೇಕು. ಕೆರೆಯಿಂದ ತಂದ 'ಕನ್ನಗಡ್ಡೆ'[೧]ಯಲ್ಲಿ ಆ ಮಣ್ಣು ಹಲವಾರು ದಿನ ಆಳದಲ್ಲಿದುದ್ದರಿಂದ ಗಾಳಿಯ ಸಂಪರ್ಕವಿರುವುದಿಲ್ಲ. ತಳಪದರದಿಂದ ಹೊರತಂದ ಮಣ್ಣನ್ನು ಒಂದೆರಡು ದಿನಗಾಳಿ ಸಂಪರ್ಕದಲ್ಲಿರಿಸಿದರೆ

---

೧. "ಕನ್ನಗಡ್ಡೆ"– ಕೆರೆಯಲ್ಲಿ ಅಲೆ ಬೀಸಿದಾಗಲೆಲ್ಲ ಒಳಸೇರುವ ಮಣ್ಣನ್ನು ನೀರು ಜಾರಿಸುತ್ತದೆ. ಅಂಥ ಮಣ್ಣು ಮೂರ್‍ನಾಲ್ಕು ಅಡಿ ಆಳಕ್ಕೆ ಸೇರಿರುತ್ತದೆ. ಅದೇ ಕುಡಿಕೆ ಮಡಿಕೆ ತಯಾರಿಕೆಗೆ ಬರುವಂತದ್ದು. ಅದನ್ನು "ಕನ್ನಗುಡ್ಡೆ" ಎನ್ನುತ್ತಾರೆ. ದಕ್ಷಿಣ ಕರ್ನಾಟಕದಲ್ಲಿ ಕುಂಬಾರಿಕೆ, ಸಂಪಾದಕ: ಪ್ರೊ. ಎಂ.ಎಲ್.ನರಸಿಂಹಮೂರ್ತಿ, ಪುಟ. ೧೩.

ಬನಿ, ಬಿಗಿ ಬರುತ್ತದೆ. ತರುವಾಯ ಆ ಮಣ್ಣನ್ನು ಬಂಡುಂಡೆಯಾಗಿ ಕುಟ್ಟಿ ಒಂದೆಡೆ ಹಾಕಬೇಕು. ಹಾಗೆ ಹಾಕುವ ಮಣ್ಣಿಗೆ ಹಿಂಬದಿಯಲ್ಲಿ ಬಂಡೆ, ಗೋಡೆಯ ಆಶ್ರಯವಿರಬೇಕು. ಇಲ್ಲದಿದ್ದಲ್ಲಿ ಮಣ್ಣು ಹರಡಿಕೊಳ್ಳುತ್ತದೆ. ಅಂಥ ಆಶ್ರಯದ ಸೌಲಭ್ಯವಿಲ್ಲದಿದ್ದಾಗ ಚಿಕ್ಕ ಹೊಂಡ ತೆಗೆದು ಅದರಲ್ಲಿ ಆ ಮಣ್ಣನ್ನೆಲ್ಲ ಸುರಿದು, ಹದಕ್ಕೆ ಬೇಕಾಗುವಷ್ಟು ನೀರನ್ನು ಬೆರಸಬೇಕು. ಮಣ್ಣು ಒಂದು ರಾತ್ರಿ ಚೆನ್ನಾಗಿ ನೆನೆದ ನಂತರ ಬೆಳಿಗ್ಗೆ ಅದನ್ನು ಕೈಯಿಂದ ಮಿದ್ದು, ಮಿದ್ದು ಉಂಡುಂಡೆ ಮಾಡಿಕೊಳ್ಳಬೇಕು. ಅತಿ ಸಣ್ಣ ಮರಳನ್ನು ಜರಡಿಹಿಡಿದು, ಮಣ್ಣಿನ ಬಂಡೆಗಳೊಂದಿಗೆ ಮಿಶ್ರಣ ಮಾಡಿ ಚೆನ್ನಾಗಿ ಹದಪಾಕ ಬರುವಂತೆ ತುಳಿಯಬೇಕು.

ಮಳೆಗಾಲದಲ್ಲಿ ಮಣ್ಣಿಗೆ ಸೆಕೆ ಇರುತ್ತದೆ (ತೇವಾಂಶ ಹೆಚ್ಚಿರುತ್ತದೆ). ಆದ್ದರಿಂದ ಜರಡಿ ಹಿಡಿದ ಶುದ್ಧವಾದ ಬೂದಿಯನ್ನು ಬೆರಸಿ ಮಿದ್ದು ಕೆಲಸಕ್ಕೆ ಅಣಿ ಮಾಡಿಕೊಳ್ಳುತ್ತಾರೆ. ಅದು ನೀರಿನ ಅಂಶವನ್ನು ಹೀರುತ್ತದೆಂದು ಕುಂಬಾರರು ಹೇಳುತ್ತಾರೆ.

### ಮಣ್ಣು ಹದಗೊಳಿಸುವ ಕ್ರಮ

ಮಣ್ಣನ್ನು ನೆನೆಸುವುದು, ಮಾಡಿದ ಪಾತ್ರೆಗಳನ್ನು ಒಣಗಿಡಲು ನೆರವಾಗುವುದು. ಮುಚ್ಚಳ, ದೀವಿಗೆ, ಹಣದ ಹುಂಡಿಗಳನ್ನು ಮಾಡುವುದು, ಅಂಚಿಕಡ್ಡಿ ಅಥವಾ ಉದ್ದವಾದ ಬೆಂಕಿಕಡ್ಡಿಯನ್ನು ಬಳಸಿ ಹಸಿ ಪಾತ್ರೆಗಳ ಮೇಲೆ ಚಿತ್ತಾರ ಬಿಡಿಸುವುದು ಮೊದಲಾದ ಕಾರ್ಯಗಳಲ್ಲಿ ಹೆಂಗಸರು ನೆರವಾಗುತ್ತಾರೆ. ಮೈಯಿ, ಕೈಯಿ ಬಲಿಯದ ಮಕ್ಕಳಿಂದ ಈ ಕಸುಬನ್ನು ನಿರ್ವಹಿಸುವುದು ಕಷ್ಟವಾಗುತ್ತದೆ. ತಿಗರಿ ಗೋಲನ್ನು ಹಿಡಿದು ತಿಗರಿಯನ್ನು ತಿರುಗಿಸಿ ಸಮತೋಲನವಾಗಿ ಮಣ್ಣನ್ನು ಆಕಾರಕ್ಕೆ ತರುವುದು ಸುಲಭ ಸಾಧ್ಯವಿಲ್ಲ, ಅನುಭವವಿರಬೇಕು. ಇಲ್ಲವಾದಲ್ಲಿ ಚಕ್ರ ತಿರುಗುವಾಗ ಕಾಲು ತಾಗಿ ಗಾಯ ಮೊದಲಾದವು ಉಂಟಾಗಬಹುದು. ಆದ್ದರಿಂದ ಮಕ್ಕಳನ್ನು ಸ್ವತಂತ್ರವಾಗಿ ಕಾರ್ಯನಿರ್ವಹಿಸಲು ಬಿಡುವುದಿಲ್ಲ.

ಕುಂಬಾರರ ಗಂಡುಮಕ್ಕಳು ದಷ್ಟಪುಷ್ಟವಾಗಿ ಬೆಳೆದು ನಂತರ ಮಣ್ಣು ತರುವುದು, ಮಣ್ಣನ್ನು ಹದಮಾಡುವುದು, ಮಿಶ್ರಣಮಾಡುವುದು ಮೊದಲಾದ ಕಾರ್ಯಗಳಲ್ಲಿ ನೆರವು ಪಡೆಯುತ್ತ ಅವರಲ್ಲಿ ಆತ್ಮವಿಶ್ವಾಸ ಮೂಡಿಸುವುದರೊಂದಿಗೆ ಹಂತ ಹಂತವಾಗಿ ತಿಗರಿಯನ್ನು ತಿರುಗಿಸುವ ವಿಧಾನವನ್ನು ಕೈಹಿಡಿದುಕೊಂಡು ತೋರಿಸುತ್ತ ಆಗಾಗ ಸ್ವತಂತ್ರವಾಗಿ ಕಾರ್ಯನಿರ್ವಹಿಸಲು ಅವಕಾಶ ಕಲ್ಪಿಸಿಕೊಡುತ್ತ ಪಾತ್ರೆಗೆ ಆಕಾರ ಕೊಡುವಾಗ ಕೈಗಳನ್ನು ಹೇಗೆ ಬಳಸಿಕೊಳ್ಳಬೇಕೆಂದು ತೋರಿಸುತ್ತ ಹಾಗೆ ಮಾಡಲು

ಅವರನ್ನು ತೊಡಗಿಸುತ್ತಾರೆ. ತಳತಟ್ಟುವ (ತಳಮುಚ್ಚುವ) ಕಾರ್ಯ ಹೊಳಪಿಡುವ ಮುಂತಾದ ಕೆಲಸಗಳಲ್ಲಿ ತೊಡಗಿಸಿ ಬಲಿತ ಮಕ್ಕಳಿಗೆ ತರಬೇತಿಗೊಳಿಸಲಾಗುತ್ತದೆ. ಹೀಗೆ ಅಭ್ಯಾಸ ಮಾಡುತ್ತ ಮಾಡುತ್ತ ಅವರು ಸ್ವತಂತ್ರವಾಗಿ ಕಾರ್ಯನಿರ್ವಹಿಸುವಷ್ಟು ಪರಿಣತಿಯನ್ನು ಪಡೆದುಕೊಳ್ಳುತ್ತಾರೆ.

ಈ ರೀತಿ ಅತಿ ಮಿದು ಮತ್ತು ಹದವಾದ ಮಿಶ್ರಣದಿಂದ ತತ್ರಾಣಿ, ಮಂಗಳ ಸಮಾರಂಭಕ್ಕೆ ಅಗತ್ಯವಾಗುವ ಹಣತೆ, ಮಡಕೆಗಳು, ಹುಕ್ಕಾ, ಗುಡಗುಡಿ ಚಿಲುಮೆಗಳು, ವಿವಿಧ ಸುಂದರ ಆಕಾರದ ಹೊರಮೈ ಹೊಳಪುಳ್ಳ ಹೂಜಿ, ಹೂಬಳ್ಳಿ ಚಿತ್ರವಿನ್ಯಾಸಗಳುಳ್ಳ ಕುಡಿಕೆ, ಬಿಂದಿಗೆ ಮುಂತಾದ ಸೂಕ್ಷ್ಮ ಸುಳುಹು ಹೊಳಹುಗಳುಳ್ಳ ಪಡಗ ಪಾತ್ರೆಗಳನ್ನು ಸಿದ್ಧಗೊಳಿಸಲಾಗುತ್ತದೆ. ಇಂದಿಗೂ ಖಾನಾಪುರ ಹಳ್ಯಾಳ, ಕುಂಬಾರವಾಡೆ ಮುಂತಾದ ಕಡೆಯ ಕುಂಬಾರಿಕೆ ಕರ್ನಾಟಕದಲ್ಲಿ ಸುಪ್ರಸಿದ್ಧವಾಗಿದೆ.

**ತಯಾರಿಕಾ ಉಪಕರಣಗಳ ಸಿದ್ಧತೆ:**

ಕುಂಬಾರಿಕಾ ವೃತ್ತಿಯಲ್ಲಿ ಅತೀ ಮುಖ್ಯವಾದದ್ದು ಈ 'ಗುಬ್ಬು ಗಲ್ಲು' (ಗುಂಡು ಕಲ್ಲು ಗಾತ್ರದ ಕಲ್ಲಿಗೆ ಮಧ್ಯಭಾಗದಲ್ಲಿ ೧/೪ ಅಥವಾ ೧/೨ ಇಂಚು ಗುಳಿ ಮಾಡಿರುತ್ತಾರೆ). ತಿಗರಿಯ ತಿರುಗಣೆ ಕೀಲನ್ನು ಅದರಲ್ಲಿರಿಸಿದಾಗ ಸರಾಗವಾಗಿ ತಿರುಗುವಂತೆ ಆ ಗುಳಿಗೆ ಹರಳೆಣ್ಣೆ ಅಥವಾ ಹೊಂಗೆ ಎಣ್ಣೆಯನ್ನು ಬಳಸುತ್ತಾರೆ. ಆ ಗುಬ್ಬಕಲ್ಲು ಚಿಕ್ಕದಾಗಿರುವುದರಿಂದ, ಜೇಡಿಮಣ್ಣಿಗೆ ತೆಂಗಿನನಾರು ಅಥವಾ ಕತ್ತೆ ಲದ್ದಿಯನ್ನು ಬೆರಸಿ ಚೆನ್ನಾಗಿ ಗಟ್ಟಿಗೊಳಿಸಿ ಮಧ್ಯದಲ್ಲಿ ಬಿಗಿ ಮಾಡಬೇಕು. ಅದು ಆರಿದ ನಂತರ ಉಪಯೋಗಕ್ಕೆ ಸಿದ್ದವಾಗುತ್ತದೆ.

ತಿಗರಿಯ ಚಕ್ರ ಕಟ್ಟಿಗೆಯಧಾರಿಯಾಗಿರುತ್ತದೆ. ಮಧ್ಯದಲ್ಲಿ ತಿಗರಿ ಗುಂಭವಿದ್ದು ಅದರಿಂದ ಸುಮಾರು ನಾಲ್ಕು ಅರೆ(ಕಾಲು)ಗಳನ್ನು ಸ್ವಲ್ಪ ಸ್ವಲ್ಪ ಅಂತರವಿರಿಸಿ ಚಕ್ರಕ್ಕೆ ಜೋಡಿಸಿರುತ್ತಾರೆ. ಮೇಲುಭಾಗದಲ್ಲಿ ಮಣ್ಣನ್ನು ಇಡಲು ಅನುಕೂಲವಾಗುವಂತೆ ಸಮತಟ್ಟನ್ನು ಮಾಡಿದರೆ, ಕೆಳಭಾಗದಲ್ಲಿ ಕಬ್ಬಿಣದ ಸರಳಿನಿಂದ ಮಾಡಿದ ಸಣ್ಣದಾದ ಚಿಕ್ಕ ತಿರುಗಣೆಯಿರುತ್ತದೆ. ತಿಗರಿಯ ಚಕ್ರದ ಸುತ್ತಳತೆ ಸುಮಾರು ಎರಡು ಮೀಟರ್ ಇರುತ್ತದೆ. ಚಕ್ರದ ಮೇಲುಭಾಗದಲ್ಲಿ ತಿಗರಿಗೋಲಿರಿಸಿ, ತಿರುಗಿಸಲು ಅನುಕೂಲ-ವಾಗುವಂತೆ ಒಂದು ಚಿಕ್ಕಕುಳಿ ಮಾಡಿರುತ್ತಾರೆ. ಸರ್ಕಾರದವರು ಉದ್ಯಮದ ಅಭಿವೃದ್ಧಿಗಾಗಿ ನೀಡುತ್ತಿರುವ ತಿಗರಿಗಳು ಹಗುರಾದ ಲೋಹ ಹಿಂಡಾಲಿಯಂನಿಂದ ತಯಾರಾಗಿದೆ. ಕೆಲವು ಕುಂಬಾರರು ಮೋಟಾರ್ ಚಾಲಿತ ತಿಗರಿ ಚಕ್ರಗಳನ್ನು

ಬಳಸುತ್ತಾರೆ. ಈ ಮೋಟಾರು ಚಾಲಿತ ತಿಗರಿಯನ್ನು ಇತ್ತೀಚೆಗೆ ಯಾರು ಬಳಸಿರುವುದನ್ನು ನೋಡುತ್ತೇವೆ.

ಗುಬ್ಬುಕಲ್ಲನ್ನು ಕೆಳಭಾಗದಲ್ಲಿ (ನೆಲದಮೇಲೆ) ಇಟ್ಟು ಅದರ ಮೇಲೆ ತಿಗರಿಯನ್ನು ಬಗ್ಗಿಸಬೇಕು. ತಿಗರಿ ಗುಂಭದ ಮೇಲೆ ಕಲಸಿದ ಮಣ್ಣನ್ನು ಸ್ವಲ್ಪಸ್ವಲ್ಪವೇ ತಟ್ಟುವುದು. ಅದನ್ನು ಒಂದು ಸಮತಟ್ಟೆಗೆ ಬರುವಂತೆ ಕೈಯಿಂದ ತೀಡುತ್ತಿರಬೇಕು. ಚಕ್ರ ತಿರುಗುತ್ತಿರುವಾಗಲೇ ಈ ಕೆಲಸವನ್ನು ಮಾಡಬೇಕು. ಇದನ್ನು 'ತಿರಿ' ಮಾಡುವುದು ಎನ್ನುತ್ತಾರೆ.

**ಮಡಿಕೆಯ ತಯಾರಿಕಾ ವಿಧಾನ:**

ಕುಂಬಾರರು ತಿಗರಿಯ ಮೇಲೆ ಮಣ್ಣನ್ನು ಸಮತಟ್ಟಾಗಿರಿಸಿಕೊಂಡ ನಂತರ ಚಕ್ರವನ್ನು ತಿಗರಿ ಗೋಲಿನಿಂದ ತಿರುಗಿಸಿ, ಕೋಲನ್ನು ಬದಿಗಿರಿಸಬೇಕು. ನಂತರ ಎರಡು ಕೈಗಳಿಂದಲೂ ನೀರು ಚಿಮುಕಿಸುತ್ತ ಮಣ್ಣನ್ನು ತೇವಗೊಳಿಸಬೇಕು. ತರುವಾಯ ಬಲಗೈಯನ್ನು ಮಣ್ಣಿನ ಮೇಲು ಭಾಗದಲ್ಲಿ ಎಡಗೈಯನ್ನು ತಿಗರಿ ಗುಂಭದ ಮಣ್ಣಿನ ತಳಭಾಗದಲ್ಲಿರಿಸಿಕೊಂಡು ಅದನ್ನು ಮೇಲಕ್ಕೆ ಗೋಪುರದಂತೆ ಎತ್ತಿಕೊಳ್ಳಬೇಕು. ಅದನ್ನು "ಹೊಳಪು" ಎನ್ನುತ್ತಾರೆ.

ಈ ಹೊಳಪುವಿನ ಬಳಕೆಯಿಂದ ವಸ್ತು ದಿನ ಬಳಕೆ ಹೇಗಿರುತ್ತದೆಂದರೆ ಹೊಳಪನ್ನು ಸಿದ್ಧಪಡಿಸಿಕೊಂಡ ನಂತರ ನಿರ್ಮಾಣ ಮಾಡಬೇಕಾದ ವಸ್ತುವಿಗೆ ತಕ್ಕಂತೆ ಮಣ್ಣು ಬಳಕೆಯಾಗುತ್ತದೆ. ದೊಡ್ಡಗಾತ್ರದ ಗುಡಾಣವಾದರೆ ಒಂದು ಸಾರಿ ಎತ್ತಿಕೊಂಡ ಹೊಳಪು ಪೂರ್ಣ ಉಪಯೋಗವಾಗುತ್ತದೆ. ಸಣ್ಣಪ್ರಮಾಣದ ವಸ್ತುಗಳಿಗಾದರೆ ಒಂದು ಹೊಳಪು ಮಣ್ಣು ಮೂರು, ನಾಲ್ಕು ಮಡಕೆಗೆ ಉಪಯೋಗವಾಗುತ್ತದೆ. ತೀರ ಸಣ್ಣವಾದರೆ ಒಂದು ಹೊಳಪು ಮಣ್ಣಿನಲ್ಲಿ ೧೦-೧೫ ವಸ್ತುಗಳಾಗಿರುತ್ತವೆ. ಹೀಗೆ ಚಕ್ರದ ಮೇಲಿರುವ ತಿರಿಯಿಂದ ೪ ಹೊಳಪು ಎತ್ತಬಹುದು. ಅಂದರೆ ೪ ಬಾರಿ ಮಣ್ಣನ್ನು ವಿವಿಧ ವಸ್ತುಗಳ ನಿರ್ಮಾಣದಲ್ಲಿ ಬಳಸಿಕೊಳ್ಳಬಹುದು.

ಹೊಳಪು ತಯಾರಿಸಿಕೊಂಡ ನಂತರ ಬಲಗೈ ಒಳಗಿರುತ್ತದೆ. ಸಮತಟ್ಟೆಗೆ ತಕ್ಕ ಹಾಗೆ ಎಡಗೈ ಹೊರಗಿರುತ್ತದೆ. ನಂತರ ಮಣ್ಣಿಗೆ ಒಂದು ರಊಪಕೊಡುವ ಸಲುವಾಗಿ ಎಡಗೈಯನ್ನು ಒಳಗಿರಿಸಿ ಬಲಗೈಯನ್ನು ಹೊರಗಿರಿಸಿಕೊಂಡು ಹೆಬ್ಬೆಟ್ಟು ಕೆಳಗಿಳಿಸಿ, ಬೆರಳುಗಳನ್ನು ತಳಮುಖವಾಗಿರಿಸಿಕೊಂಡು ತೆರೆ ಎನ್ನುತ್ತಾರೆ. ಅದಾದ ನಂತರ ನಿರ್ಮಾಣ ಮಾಡುತ್ತಿರುವ ಪಾತ್ರೆಗೆ ತಕ್ಕಂತೆ ರೂಪಕೊಡುವ ಕಾರ್ಯ ನಡೆದಿರುತ್ತದೆ.

ತೆರೆ ಎತ್ತಿಕೊಂಡ ನಂತರ ಎಡಗೈಯಲ್ಲಿ, ಬಲಗೈ ಜೋಡಿಸಿಕೊಂಡು ಕಂಠ ನಿರ್ಮಾಣ ಮಾಡುತ್ತಾರೆ. ಇದಾದ ಮೇಲೆ ದಬ್ಬೆ ತೆಗೆದುಕೊಂಡು ಒಂದು ತುದಿಯಲ್ಲಿ ಕೆಳಭಾಗದಿಂದ ಮೇಲುಭಾಗದವರೆಗೆ ಎಡಗೈಯನ್ನು ನಿರ್ಮಿಸುತ್ತಿರುವ ವಸ್ತುವಿನ ಒಳಗಿರಿಸಿಕೊಂಡು, ಹೊರಭಾಗದಲ್ಲಿ ಬಲಗೈಲಿ ದಬ್ಬೆ ಹಿಡಿದಿಕೊಂಡು ಕಂಠವನ್ನು ಸರಿಯಾಗಿ ನಿಲ್ಲಿಸಿಕೊಂಡ ನಂತರ ದಬ್ಬೆಯನ್ನು ಬದಿಗಿರಿಸಿ, ಪಾತಿಯನ್ನು ಬಳಸಿಕೊಂಡು ಕಂಠವನ್ನು ನಯಸ್ಸಾಗಿ ಎರಡು ಕೈಗಳಿಂದಲೂ ತಿದ್ದಿ ನಯಗೊಳಿಸಬೇಕು. ಪಾತಿಯನ್ನು ಬದಿಗಿಟ್ಟು, ಮುಳ್ಳು ಅಥವಾ ದಬ್ಬಳವನ್ನು ಬಳಸಿಕೊಂಡು ತಳಭಾಗದಲ್ಲಿ ಕೂಯ್ದು ಪಕ್ಕಕ್ಕೆ ಇಡಬೇಕು. ಹಾಗೆ ಇಡುವಾಗ ಕೈಗಳನ್ನು ಕೋಮಲವಾಗಿ ಬಳಸಿಕೊಳ್ಳಬೇಕು. ಸ್ವಲ್ಪ ಬಲತೋರಿಸಿದರೂ ತಯಾರಿಸಿದ ವಸ್ತು ಮಣ್ಣಿನ ಮುದ್ದೆಯಾಗಿಬಿಡುತ್ತದೆ. ಈ ಎಲ್ಲವನ್ನು ಮಾಡುತ್ತಿರುವಾಗ ತಿಗರಿ ಸುತ್ತುತ್ತಲೇ ಇರುವಂತೆ ತಿಗರಿಗೋಲಿನಿಂದ ಆಗಾಗ ಚಕ್ರವನ್ನು ತಿರುಗಿಸುತ್ತಿರಬೇಕು. ಮಳೆ, ಗಾಳಿಯ ಕಾಲದಲ್ಲಿ ಮೂರು ಘಂಟೆಗಳ ಕಾಲ ಬಿಸಿಲು ಕಾಲದಲ್ಲಿ ಒಂದು ಗಂಟೆಕಾಲ ಅದನ್ನು ಒಣಗಿಸಬೇಕು.

**ಗಟ್ಟಣೆಯ (ತಟ್ಟುವಾಗಿನ) ಕ್ರಮ:**

ತಿರುಗುತ್ತಿರುವ ತಿಗರಿಯಿಂದ ಸಿದ್ದವಸ್ತುವಿನ ರೂಪವನ್ನು ಪಡೆದುಕೊಂಡ ಮಡಿಕೆಯನ್ನು ಬಹಳ ಹಿಂದೆ ಜಿಂಕೆ ಚರ್ಮ ಹಾಕಿಕೊಂಡು, ಅದರ ಮೇಲೆ ಕುಳಿತುಕೊಂಡು ಮುಂದೆ ತಲೆದಿಂಬಿರಿಸಿಕೊಂಡು ಮಡಕೆಗಳನ್ನು ತಟ್ಟುತ್ತಿದ್ದರು. ಕಾಲಧರ್ಮಕ್ಕೆ ತಕ್ಕಂತೆ ಈಗ ಕೆಳಕ್ಕೆ ಗೋಣಿಚೀಲ ಹಾಕಿಕೊಂಡು, ಗೋಣಿಚೀಲದಿಂದ ಮಾಡಿದ ತಲೆದಿಂಬಿಟ್ಟುಕೊಂಡು, ಬಲಗಾಲಿನ ಪಾದವನ್ನು ಮುಂದಿಟ್ಟುಕೊಂಡು, ಎಡಗಾಲಿನ ಪಾದವನ್ನು ಹಿಂದಿರಿಸಿಕೊಂಡು, ಎಡಗಾಲಿನ ಮೊಣಕಾಲಿನ ಮೇಲೆ ಮಡಕೆ ಕಂಠವನ್ನು ತಿರುಗಿಸಿಕೊಂಡು ಮಡಕೆಯ ತಳಭಾಗವನ್ನು ಮೇಲುಮುಖ ಅಂದರೆ ಅರ್ಧಭಾಗಕ್ಕೆ ಓರೆಮಾಡಿಕೊಂಡು ತಳವನ್ನು ಎಡಗೈಯಿಂದ 'ಗುಂಡಪ್ಪ' (ಲಿಂಗದಾಕಾರದ ಕಲ್ಲು)ನನ್ನು ಒಳಗಿರಿಸಿಕೊಂಡು ಅದೇ ಜಾಗದಲ್ಲಿ ಹೊರಭಾಗದಲ್ಲಿ 'ಸೊಳ' (ಜಾಲಿ ಅಥವಾ ತುಗ್ಗಲಿ ಮರದಿಂದ ಮಾಡಿದ ಬಡಿಗೆ, ಹಿಂದೆ ಇದನ್ನು ಗಂಧದಕಡ್ಡಿಯಿಂದ ಮಾಡುತ್ತಿದ್ದರಂತೆ)ಯಿಂದ ಗಟ್ಟಿಸಬೇಕು. ಮಡಕೆಯನ್ನು ತಟ್ಟುವಾಗ 'ಮುಚ್ಚುಪರೆ'ಯಾದರೆ (ಮಣ್ಣಿನೊಳಗೆ ಗಾಳಿ ಸೇರಿದ್ದರೆ) ಸುಡುವಾಗ ಆ ಭಾಗದಲ್ಲೆ ಸಿಡಿಯುತ್ತದೆ. ಆದ್ದರಿಂದ ಒಳಗೆ ಸೇರಿರುವ ಆ ಗಾಳಿಯನ್ನು ತಟ್ಟುವಾಗಲೇ ಹೊರ ಹೊರಡಿಸಬೇಕು.

ಮಡಕೆಯನ್ನು ಗಟ್ಟಿಸುತ್ತಿರುವಾಗ ಸೊಳವನ್ನು ಆಗಾಗ ತೇವವಿರುವ ಬಟ್ಟೆಯ ಮೇಲೆ ಒತ್ತುತ್ತಿರಬೇಕು. ಹೀಗೆ ಮಾಡುವುದರಿಂದ ಮಡಕೆ ಬೀಲು (ಬಿರುಕು) ಬರುವುದಿಲ್ಲ. ತಳಭಾಗವನ್ನು ಮುಚ್ಚಿದ ನಂತರ ಯಾವ ಮಡಕೆಗೆ ಯಾವ ಆಕೃತಿಯೆಂಬುದನ್ನು ನಿರ್ಣಯಿಸಿ ಒಂದು ವರಸೆ ಗಟ್ಟಿಸಿದ ನಂತರ ಎರಡನೇ ಸಲ ತಟ್ಟುವಾಗ ನಯಸ್ಸಾದ ಸೊಳದಿಂದ ತಟ್ಟುತ್ತಾ ಅದಕ್ಕೆ ನುಣುಪು ನಯಗಾರಿಕೆ ತರಬೇಕು. ಹರವಿಯಾದರೆ ಒಂದು ಕಡಿಯನ್ನು ಇಟ್ಟುಕೊಂಡು ಕಂಠದ ಭಾಗವನ್ನು ತಲೆ ಕೆಳಗಿರಿಸಿಕೊಂಡು ಅದರಲ್ಲಿಡುತ್ತಾರೆ. ಹರವಿಯು ೨೦ ನಿಮಿಷಗಳ ಕಾಲ ಆರಿದ ನಂತರ ಅಲ್ಲಿಂದ ತೆಗೆದು ನೆಲದ ಮೇಲೆ ಬಾರಲು ಹಾಕಿಡುತ್ತಾರೆ. ಮೇಲು ಭಾಗದ ಕಂಠದ ಬಾಯಿಯನ್ನು ಕೆಳಮುಖವಾಗಿಸಿ ಇಡುತ್ತಾರೆ. ಸ್ವಲ್ಪ ಆರಿದ ಹರವಿ, ಮಡಕೆಯ ಒಳಭಾಗಕ್ಕೆ ನುಣುಪಾದ ಬೂದಿಯನ್ನು ಹಾಕಿ ಒಂದು ಅಥವಾ ಎರಡು ಸುತ್ತು ನಿಧಾನವಾಗಿ ತಿರುಗಿಸಿ ಅದನ್ನು ಕಾಲಮೇಲಿರಿಸಿಟ್ಟುಕೊಂಡು ಎಡಗೈಯಿಂದ ಗುಂಡಪ್ಪ, ಬಲಗೈನಿಂದ ಸೊಳ ಹಿಡಿದುಕೊಂಡು ಮತ್ತೆ ತಟ್ಟಿ ನುಣುಪು ಮಾಡುತ್ತಾರೆ. ಅದನ್ನು ಹೊಳಪಿಕ್ಕುವುದು ಎನ್ನುತ್ತಾರೆ.

ಬಹಳ ದಿನಗಳ ಹಿಂದೆ ಬೂರಗದ ಕಾಯಿದೆಯಿಂದ ಉಜ್ಜಿ ನಯಸ್ಸು ಹೊಳಪು ಮಾಡುತ್ತಿದ್ದರಂತೆ. ಪ್ಲಾಸ್ಟಿಕ್ ಬಂದ ನಂತರ ಅದರಿಂದ ಉಜ್ಜಿ, ನಯಸ್ಸು ಹೊಳಪು ತರುತ್ತಿದ್ದಾರೆ.

**ಕುಸುರಿಕೆಲಸ (ಚಿತ್ತಾರ ಬಿಡಿಸುವುದು)**

ಕುಂಬಾರರು ಮಡಿಕೆಗಳಿಗೆ ಚಿತ್ತಾರ ಬಿಡಿಸುವುದರಿಂದ ಶೋಭೆಯ ಜೊತೆಗೆ ಆಕರ್ಷಣೀಯವಾದ ಮನರಂಜನೆಯನ್ನು ನೀಡುತ್ತವೆ. ಚಿತ್ತಾರವನ್ನು ಗಟ್ಟಿಗೆ ಮಾಡುವ ಸಂದರ್ಭದಲ್ಲಿಯೇ ಸಿಡಿದಚ್ಚಿನಿಂದಲೇ ಚಿತ್ತಾರ ಬಿಡಿಸುತ್ತಾರೆ. ಕಬ್ಬಿಣದ ರೇಕಿನ (ತೆಳುವಾದ ಹಾಳೆ) ಮೇಲೆ ಒಂದು ಎರಡು ಮೂರು ರಂಧ್ರ ಮಾಡಿಕೊಂಡು ತಗಡಿನಿಂದ ನಿಧಾನವಾಗಿ ಬಡಿಯುತ್ತಾ ಕೈ ಚಳಕದಿಂದ ಬಗೆಬಗೆಯ ಚಿತ್ತಾರ ಮೂಡಿಸುತ್ತಾರೆ. ಕೆಲವರು ಸಿಡಿದಚ್ಚೆಯನ್ನು ಎತ್ತಿನ ಕೊಂಬಿನಲ್ಲೂ ಮಾಡಿಸುತ್ತಾರೆ. ಅಂದರೆ ಎತ್ತಿನ ಕೊಂಬಿನ ಮೇಲೆ ಬೇರೆಯವರಿಂದ ಕೊರಸಿ ಬೆಂಡೆಕಾಯಿ ಅಚ್ಚು, ಕುಂಬಳಕಾಯಿ ಅಚ್ಚು, ಕಳಾವರದ ಅಚ್ಚು ಮೊದಲಾದುವನ್ನು ಸಿದ್ಧಪಡಿಸಿ-ಕೊಂಡಿರುತ್ತಾರೆ. ಇದರಿಂದಲೂ ಹಸಿ ಮಡಿಕೆಯ ಮೇಲೆ ನಿಧಾನವಾಗಿ ಒತ್ತಿ ಇಲ್ಲವೇ ಬಡಿದು ಚಿತ್ತಾರ ಬಿಡಿಸಬಹುದು.

ಗಟ್ಟಣೆಯ ಮಾಡುವ ಒಂದು ತುದಿ ಭಾಗದಿಂದಲೂ ಗಟ್ಟಿಸುತ್ತಾ ಚಮತ್ಕಾರದಿಂದ ಚಿತ್ತಾರ ಮೂಡಿಸಬಹುದು. ಇದು ಕುಂಬಾರರ ಅನುಭವ ಮತ್ತು ಕಲಾಕುಶಲತೆಯನ್ನವಲಂಬಿಸಿರುತ್ತದೆ.

ಹೀಗೆ ತಯಾರು ಮಾಡಿದ ಮಣ್ಣಿನ ವಸ್ತುಗಳನ್ನು ಒಂದೆರಡು ದಿನ ಒಣಗಿಸಿದ ನಂತರ ಆವಿಗೆಯಲ್ಲಿ ಜೋಡಿಸಬೇಕು.

**ಆವಿಗೆ ಹಾಕುವುದು:**

ಈ ಆವಿಗೆ ಎಂದರೆ ಮಡಿಕೆಗಳನ್ನು ಬೇಯಿಸುವ ಒಲೆ ಕುಂಬಾರರ ಆ ಆವಿಗೆಯ ರಚನೆ ಬಹಳ ಪೇಚಿನಿಂದ ಕೂಡಿರುತ್ತದೆ ಎಂದು ಕುಂಬಾರರ ಹೇಳಿಕೆಯಾಗಿದೆ. ತಿಗರಿಯಿಂದ ಸಿದ್ಧವಾದ ಪಾತ್ರೆಗಳನ್ನು ಬೂದಿಯ ಹಾಸಿಗೆ ಮೇಲಿಟ್ಟು ಬಿಸಿಲಲ್ಲಿ ಅದರ ಮೇಲ್ಮೈ ತೇವ ಆರುವಷ್ಟು ಮಟ್ಟಿಗೆ ಒಣಗಿಸಿ ಆ ಬಳಿಕ ಆವಿಗೆಯ ಒಳಬದಿ ಅಲ್ಲಲ್ಲಿ ಒಣಗಿದ ಹುಲ್ಲು ಸೀಳಿದ ಚಕ್ಕೆಗಳನ್ನು ಪಾತ್ರೆಗೆ ತಾಕದಂತೆ ಪಾತ್ರೆಗಳ ಗೂಡುಗಳನ್ನು ಸಾಲುಸಾಲಾಗಿ ಜೋಡಿಸಲಾಗುತ್ತದೆ. ಹೀಗೆ ಜೋಡಿಸುವಾಗ ತಳದಿಂದ ಮೇಲ್ಭಾಗದವರೆಗೂ ಕಂಡಿ ಬಿಟ್ಟಿರಲಾಗುತ್ತದೆ. ಹೀಗೆ ತಳಭಾಗದಲ್ಲಿ ಉರಿ ಮಾಡಿದಾಗ ಪಾತ್ರೆಗಳಿಗೆ ವ್ಯಾಪಕ ಮತ್ತು ಸಮಾನ ಮಂದೋಷ್ಣ ಪೂರೈಕೆಯಾಗಿ ಪಾತ್ರೆಗಳಲ್ಲಿರುವ ತೇವಾಂಶ ನಿವಾರಣೆಗೊಂಡು ಸುಟ್ಟಮಡಕೆ ಗಡಸು, ನಿಶ್ಚಿತ ಗಾತ್ರ ಗಟ್ಟಿ ಆಕಾರಗಳನ್ನು ಹೊಂದಿ ಸಿದ್ಧವಾಗುತ್ತದೆ.[೧]

**ವೃತ್ತಿಯಲ್ಲಿ ವಹಿಸಬೇಕಾದ ಎಚ್ಚರಿಕೆ:**

ಕುಂಬಾರರು ಮುಖ್ಯವಾಗಿ ಎಲ್ಲಿ ಎಚ್ಚರಿಕೆ ವಹಿಸಬೇಕೆಂದರೆ ಜೇಡಿಮಣ್ಣನ್ನು ಹದಮಾಡುವಾಗ ಸಗಣಿ ಕುರಿ ಪಿಚ್ಚಗೆ (ಹಿಕ್ಕೆ) ಹುಲ್ಲಿನಕಾಳು, ಗರಿಕೆಬೇರು, ರಾಗಿಕಾಳು, ಭತ್ತದಕಾಳು, ದಪ್ಪ ಮರಳಿನ ಕಣ ಇದ್ದಲ್ಲಿ ತೆಗೆದುಹಾಕಬೇಕು. ಇಲ್ಲದಿದ್ದಲ್ಲಿ ಇವು ಸಿಡಿದು ಮಡಕೆಗೆ ಹಾನಿಯನ್ನುಂಟುಮಾಡುತ್ತವೆ. ಅಲ್ಲದೆ ಸಗಣಿ, ಕುರಿ ಹಿಕ್ಕೆಯ ಜಾಗದಲ್ಲಿ ಬೆಂದು ಬೂದಿಯಾಗಿ ಮಡಕೆ ತೂತುಬೀಳುತ್ತದೆ.

**ಎದುರಾಗುವ ಅಡ್ಡಿಆತಂಕಗಳು:**

ನಮ್ಮ ಭಾರತದೇಶದಲ್ಲಿನ ಪ್ರತಿಯೊಂದು ವೃತ್ತಿಯು ಪ್ರಕೃತಿಯನ್ನೇ ಅವಲಂಬಿಸಿಕೊಂಡು ನಡೆಯುತ್ತಿರುತ್ತವೆ. ಹೀಗೆ ಪ್ರಕೃತಿಯನ್ನು ಅವಲಂಬಿಸಿಕೊಂಡಿರುವ

---

೧. ಡಾ. ದೇವೇಂದ್ರಕುಮಾರ ಎಸ್.ಹಕಾರಿ, ಜನಪದ ಸಾಹಿತ್ಯ ದರ್ಶನ, ಏಳನೇ ಸಂಪುಟ, ಪುಟ. ೨೦೬.

ಪ್ರತಿಯೊಂದು ವೃತ್ತಿಗೂ ಏರಿಳಿತಗಳು ಇದ್ದೇ ಇರುತ್ತದೆ. ಆ ಹವಾಮಾನಕ್ಕೆ ಹೊಂದಿಕೊಂಡು ಹೋದರು ಕೆಲವೊಮ್ಮೆ ಅಪಾಯ ತಪ್ಪುವುದಿಲ್ಲ. ಪ್ರಕೃತಿ-ಯಲ್ಲುಂಟಾಗುವ ಏರಿಳಿತಗಳು ಕುಂಬಾರಿಕೆಯ ಸಂದರ್ಭದಲ್ಲೂ ಸಹ ಅಡ್ಡಿಆತಂಕ-ವನ್ನು ಉಂಟುಮಾಡುತ್ತದೆ. ಮಳೆಗಾಲದಲ್ಲಿ ಮಣ್ಣುತರುವುದು, ಮಡಕೆಯನ್ನು ಒಣಗಿಸುವುದು ಎಲ್ಲಕ್ಕಿಂತ ಹೆಚ್ಚಾಗಿ ಆವಿಗೆಯನ್ನೊಡುವುದು, ತುಂಬಾ ಕಷ್ಟಕರ-ವಾಗುತ್ತದೆ. ಸರಿಯಾದ ಬಿಸಿಲು ಇಲ್ಲದಿದ್ದರೆ ಮಡಕೆಯು ಸರಿಯಾಗಿ ಒಣಗಿದ ಕಾರಣ ಸ್ವಲ್ಪಮಟ್ಟಿಗೆ ಹಾನಿಗೊಳಗಾಗುತ್ತದೆ.

ಗಾಳಿ ಹೆಚ್ಚಾಗಿ ಬೀಸುವುದರಿಂದ ಆವಿಗೆಯಲ್ಲಿನ ಶಾಖ ಸಮಾನವಾಗಿ ತಟ್ಟದೆ, 'ಅರೆಬೆಂದ' ಪಾಕವಾದರೆ ನಷ್ಟವಾಗುತ್ತದೆ. ಹೆಚ್ಚಾಗಿ ಅತ್ತಿತ್ತಗಾಳಿ ಬೀಸುವುದರಿಂದ ಸರಿಯಾದ ಶಾಖ ಉಂಟುಮಾಡಲು ಹೆಚ್ಚಿನ ಪ್ರಮಾಣದ ಸೌದೆ, ಹುಲ್ಲುಗರಿ, ಪುಳ್ಳೆ ಬಳಸಬೇಕಾಗುತ್ತದೆ. ಇದರಿಂದ ಆರ್ಥಿಕ ಹೊರೆಯಾಗುತ್ತದೆ.

ಆವಿಗೆಯ ಮುಂಭಾಗ, ಉರಿ ಹಾಕಿದ ಭಾಗದಿಂದ ಗಾಳಿ ಬೀಸಿದರೆ ಸುಡಲು ಅನುಕೂಲವಾಗುತ್ತದೆ. ಆದರೆ ಆವಿಗೆಯ ಹಿಂಭಾಗದಿಂದ ಗಾಳಿ ಬೀಸಿದರೆ ಉರಿ ಸಮರ್ಪಕವಾಗಿ ಉರಿಯದೆ ಸುಡುವ ಕೆಲಸ ತಡವಾಗುತ್ತದೆ. ಕೆಲವೊಮ್ಮೆ ಇದರಿಂದ ಮಡಕೆ ಮೊದಲಾದವುಗಳಿಗೆ ಹಾನಿಯಾಗುವುದುಂಟು.

**ಹವಾಮಾನ ಜ್ಞಾನ:**

ಹಳ್ಳಿಯ ಪ್ರತಿಯೊಬ್ಬ ವ್ಯಕ್ತಿಯು ಪ್ರಕೃತಿಯಲ್ಲಿ ನಡೆಯುವ ಹವಾಮಾನದ ಮುನ್ಸೂಚನೆಯನ್ನು ಸಹಜವಾಗಿಯೇ ತಿಳಿದಿರುವುದನ್ನು ಕಾಣುತ್ತೇವೆ. ಇದು ವಿಜ್ಞಾನದ ವಸ್ತುಗಳಿಂದಲ್ಲ. ತಾವು ಕಲಿತ ಪಾಠದಿಂದಂತೂ ಅಲ್ಲ. ಅವರು ಪ್ರಕೃತಿಯಲ್ಲಾಗುವ ಹವಾಮಾನ ಗುಣಗಳಿಂದ ವಾತಾವರಣವನ್ನು ನೋಡಿ ತಮ್ಮ ಅನುಭವದ ಮೂಲಕ ಹೇಳುತ್ತಾರೆ. ಇದು ಅವರಿಗೆ ಹಿಂದಿನಿಂದಲೂ ಬಂದಂತಹ ಒಂದು ಜ್ಞಾನವಾಗಿದೆ. ಈ ಹವಾಮಾನ ಕುಂಬಾರರ ಮೇಲೆ ಹೇಗೆ ಪ್ರಭಾವ ಬೀರಿದೆ ಎಂದರೆ ಪ್ರಾಕೃತಿಕ ಶಕ್ತಿಗಳಿಂದ, ಸೂರ್ಯಚಂದ್ರರಲ್ಲದೆ ಪ್ರಕೃತಿ ವ್ಯಾಪಾರಗಳಿಂದ ಮೇಲ್ಮೈ ಬೇರೆ ಬೇರೆ ಗಾಳಿ, ಮಳೆಗಳು ಸಹಜವಾಗಿಯೇ ಕುಂಬಾರರ ಮೇಲೆ ಪ್ರಭಾವ ಬೀರಿವೆ. ಮಾನವ ಜೀವನದ ಮೇಲೆ ಅದ್ಬುತ ಪ್ರಭಾವ ಬೀರುವ ಪ್ರಾಕೃತಿಕ ಶಕ್ತಿಗಳ ಪೈಕಿ ಮಳೆಯ ಸ್ಥಾನ ಬಹುಮುಖ್ಯವಾದುದು. ಸಕಲ ಜೀವಿಗಳಿಗೂ ಜೀವನಾಧಾರವಾದ ಹಾಗೂ ಜೀವಪೋಷಕವಾದ ಮಳೆಯನ್ನು ಜಗತ್ತಿನ ಎಲ್ಲೆಡೆಯೂ ವರದಾಯಕ ಎಂದು ಭಾವಿಸಲಾಗಿದೆ. ಅದಕ್ಕೆ ದೈವತ್ವವನ್ನು ಆರೋಪಿಸಿ

ಪೂಜಿಸಲಾಗುತ್ತದೆ. ಇದರ ಬಗ್ಗೆ[೧] ವಿಸ್ತಾರವಾಗಿ ಮೋಡ ಮಳೆಯೆಂಬ ಅಧ್ಯಾಯದಲ್ಲಿ ತಿಳಿಸಿದ್ದಾರೆ. ಬೇಸಿಗೆಯ ಧಗೆಯಿಂದ ಬಸವಳಿದ ಭೂಮಿಗೆ ತಂಪೆರೆದ ಮೊದಲ ಮಳೆಯೆ 'ಅಶ್ವಿನಿ' ಬಿದ್ದ ನೀರನ್ನೆಲ್ಲ ನೆಲ ಹೀರಿ ಬೀಡುತ್ತದೆ. ಇದರಿಂದ ಕೆರೆಯ ಅಂಗಳದಲ್ಲಿ ಬಿರುಕಾಗಿದ್ದ ಭೂಭಾಗ ಹದಗೊಂಡು ಕಸುಬಿಗೆ ಮಣ್ಣು ಸೋಸಿತರಲು ಅನುಕೂಲವಾಗುತ್ತದೆ.

ಇಂದಿಗೂ ಗ್ರಾಮಾಂತರ ಪ್ರದೇಶಗಳಲ್ಲಿ ಆಯಾಗಾರರಾಗಿ ಇಲ್ಲವೇ ಸ್ವಲ್ಪಮಟ್ಟಿಗೆ ವ್ಯವಸಾಯದ ಕಸುಬನ್ನ ಮಾಡುತ್ತಿರುವ ಕುಂಬಾರರು ಅಶ್ವಿನಿ ಮಳೆಯ ಬಗ್ಗೆ ಮಾಡುವ ಆಕ್ಷೇಪಣೆಯೆಂದರೆ ಈ ಮಳೆಯಿಂದ ಮಣ್ಣಿನ ಮೇಲು ಪದರವು ಕೊಚ್ಚಿಹೋಗು-ವುದರಿಂದ ಭೂಮಿಯ ಫಲವತ್ತತೆ ಕಡಿಮೆಯಾಗುತ್ತದೆ. ವ್ಯವಸಾಯದ ದೃಷ್ಟಿಯಿಂದ ಅನುಕೂಲವು ಆಗಿದೆ.

ಭರಣಿ ಮಳೆಯಿಂದ ಸಮೃದ್ಧವಾದ ಬೆಳೆಯಾಗುತ್ತದೆ. 'ಭರಣಿ ಬಂದರೆ ಧರಣಿ'ಯೆಲ್ಲ ಬೆಳೆಯೆಂಬ ಗಾದೆಯು ಸಹ ಹುಟ್ಟಿಕೊಂಡಿರುತ್ತದೆ. ಆಶ್ಲೇಷ ಮಳೆಯಿಂದ ಮುಂದಕ್ಕೆ ಮಳೆಯ ಪ್ರಮಾಣ ಕಡಿಮೆಯಾಗುತ್ತಾ ಬರುತ್ತದೆ. ಈ ದೃಷ್ಟಿಯಿಂದ ಕುಂಬಾರಿಕೆಗೆ ಸ್ವಲ್ಪಮಟ್ಟಿಗೆ ಅನುಕೂಲವೇ ಆಗುತ್ತದೆ. ಆದರೆ ಮಳೆ ಬರುತ್ತದೋ ಇಲ್ಲವೊ ಎಂಬುದನ್ನು ಪೂರ್ವಭಾವಿಯಾಗಿ ತಿಳಿದುಕೊಳ್ಳಲು ಸೂರ್ಯ, ಚಂದ್ರರ ಸುತ್ತ ಹತ್ತಿರ ಅಥವಾ ದೂರ ಗೂಡುಕಟ್ಟುವುದನ್ನು ಗಮನಿಸುತ್ತಾರೆ. ನಡುಹಗಲು ಹೊತ್ತಿನಲ್ಲಿ ಸೂರ್ಯನ ಸುತ್ತ ರಾತ್ರಿಯಲ್ಲಿ ಚಂದ್ರನ ಸುತ್ತ ಗೂಡುಕಟ್ಟಿದರೆ ಮಳೆ ಬರುತ್ತದೆ. ಚಂದ್ರನ ಹತ್ತಿರ ಗೂಡುಕಟ್ಟಿದರೆ ಒಂದು ವಾರದೊಳಗೆ ದೂರದಲ್ಲಿ ಗೂಡುಕಟ್ಟಿದರೆ ಮೂರು ದಿವಸದೊಳಗೆ ಮಳೆಬರುತ್ತದೆ ಎಂಬ ಪ್ರತೀತಿ ಕುಂಬಾರ ಜನಾಂಗದ ನಂಬಿಕೆಯಾಗಿದೆ. ಆಕಾಶದಲ್ಲಿ ಕೆಮ್ಮುಗಿಲು (ಕೆಂಪುಮೋಡ) ಹರಡಿದ್ದರೆ ಮಳೆ ಬರುತ್ತದೆ. ಕುಂಬಾರ ಮೂಲೆಯಲ್ಲಿ (ನೈಋತ್ಯ) ಮಿಂಚಿದರೆ ಮಳೆ ಬರುತ್ತದೆ. ಪಶ್ಚಿಮದಲ್ಲಿ ಕಾಮನಬಿಲ್ಲು ಮೂಡಿದರೆ ಮಳೆ ಬರುತ್ತದೆ. ದೇವಮೂಲೆಯಲ್ಲಿ (ಈಶಾನ್ಯ) ಮಿಂಚಿದರೆ ಮಳೆ ಬರುತ್ತದೆ ಎನ್ನುತ್ತಾರೆ.

ನಮ್ಮಲ್ಲಿ ಗಾಳಿಯನ್ನು ವಾಯುದೇವ ಎಂದು ಕರೆಯುತ್ತಾರೆ. ಏಕೆಂದರೆ ಗಾಳಿಯಿಲ್ಲದ ಯಾವ ಜೀವಿಯೂ ಬದುಕಲಾರದು. ಆಷಾಢಮಾಸದಲ್ಲಿ ಗಾಳಿಯು ಹೆಚ್ಚಾಗಿರುತ್ತದೆ. ಅಲ್ಲದೆ ಈ ದಿನಗಳಲ್ಲಿ ಯಾವುದೇ ಮಂಗಳ ಕಾರ್ಯಗಳು ನಡೆಯುವುದಿಲ್ಲವಾದ್ದರಿಂದ ಹಾಗೂ ಕೆಲವರು ಹೊಸ ಮಡಕೆ-ಕುಡಿಕೆಗಳನ್ನು ಮನೆಗೆ

---

೧. ಡಾ. ಕೆ.ಆರ್.ಸಂಧ್ಯಾರೆಡ್ಡಿ, ಜನಪದ ಸಾಹಿತ್ಯದರ್ಶನ (ಸಂಪುಟ ೧೨), "ಮೋಡಮಳೆ", ಪುಟ. ೮೭.

ಕೊಂಡೊಯ್ಯುವುದಿಲ್ಲವಾದ್ದರಿಂದ ಆಷಾಡ ಮಾಸದಲ್ಲಿ ಕುಂಬಾರಿಕೆಯನ್ನು ಅಷ್ಟಾಗಿ ಮಾಡುವುದಿಲ್ಲ.

"ಕುಂಬಾರ ಗಾಳಿ" ದಕ್ಷಿಣದಿಂದ ಉತ್ತರಕ್ಕೆ ಬೀಸುತ್ತದೆ. ಕುಂಬಾರನ ಆವಿಗೆ ಹೆಚ್ಚಾಗಿ ದಕ್ಷಿಣಾಭಿಮುಖವಾಗಿರುತ್ತದೆ. ಆದುದರಿಂದ ದಕ್ಷಿಣದ ಗಾಳಿ ಬೀಸಿದರೆ ಮಾತ್ರ ಆತನ ಒಲೆ ಉರಿಯಲು ಅನುಕೂಲವಾಗುತ್ತದೆ. ಕುಂಬಾರನಿಗೆ ಹೆಚ್ಚು ಉಪಯುಕ್ತವಾದ ಈ ಗಾಳಿಯನ್ನು "ಕುಂಬಾರಗಾಳಿ" ಎಂದು ಕರೆವ ವಾಡಿಕೆ. ಗಾಳಿಯಿಲ್ಲದೆ ಬೆಂಕಿ ಪುಟಗೊಳ್ಳಲಾರದೆಂಬುದು ಸಾಮಾನ್ಯ ನಂಬಿಕೆ. ಒಂದು ಸಲ ಕುಂಬಾರನ ಒಲೆ ಗಾಳಿ ಬೀಸುವುದರಿಂದ, ಹೊತ್ತಿ ಉರಿಯಲಿಲ್ಲವಂತೆ, ಉರಿಯಿಲ್ಲದೆ ಗಡಿಗೆ – ಮಡಿಕೆಗಳು ಸುಡುವುದೆಂತು? ಆಗ ಕುಂಬಾರ ತನ್ನ ಒಲೆ ಉರಿಯಲು ದಕ್ಷಿಣ ದಿಕ್ಕಿನ ಗಾಳಿಯನ್ನು ಪ್ರಾರ್ಥಿಸಿದನಂತೆ. ಅವನ ಪ್ರಾರ್ಥನೆಗೆ ಗಾಳಿದೇವ ದಕ್ಷಿಣದಿಂದ ಬೀಸಿದನಂತೆ. ಹೀಗೆ ಕುಂಬಾರನಿಂದ ಕುಂಬಾರನಿಗಾಗಿ, ಹುಟ್ಟಿಕೊಂಡ ಗಾಳಿಯನ್ನು "ಕುಂಬಾರಗಾಳಿ" ಎಂದು ಸಾಮಾನ್ಯವಾಗಿ ಕರೆಯುವ ರೂಢಿ. ಇನ್ನೊಮದು ನಂಬಿಕೆ ಹೀಗಿದೆ; ಕುಂಬಾರ ತನ್ನ ಗಡಿಗೆಗಳನ್ನು ಅರ್ಧಮರ್ಧ ಸುಟ್ಟಿದನಂತೆ. ಅಷ್ಟರಲ್ಲಿಯೇ ಗಾಳಿ ನಿಂತು ಒಲೆ ಉರಿಯಲಿಲ್ಲವಂತೆ. ಆಗ ಕುಂಬಾರ ದಕ್ಷಿಣಕ್ಕೆ ಮುಖಮಾಡಿ, ತನ್ನ ಮುಚ್ಚಳದಿಂದ ಗಾಳಿ ಬೀಸಿದನಂತೆ. ಒಲೆ ಉರಿದು ಗಡಿಗೆಗಳು ಪೂರ್ತಿ ಸುಟ್ಟುವಂತೆ. ಹೀಗೆ ಕುಂಬಾರ ತನಗೋಸ್ಕರ ತಾನೇ ತರಿಸಿದ ಅಥವಾ ಬರಿಸಿದ 'ಗಾಳಿ'ಯನ್ನು "ಕುಂಬಾರಗಾಳಿ" ಎಂದು ಅನೇಕ ಕಡೆ ಕರೆಯುವ ವಾಡಿಕೆ.

ದಕ್ಷಿಣದಿಂದ ಉತ್ತರಕ್ಕೆ ಬೀಸುವ 'ಹನುಮನಗಾಳಿ'ಯೂ ಕುಂಬಾರ ಗಾಳಿಯ ಗುಣಧರ್ಮಗಳನ್ನು ಹೊಂದಿದೆ. ಗಾಳಿಯಲ್ಲಿ ತೇವಾಂಶ ಹೆಚ್ಚಾಗಿರುವ ದಿನಗಳಲ್ಲಿ ಕುಂಬಾರಿಕೆಗೆ ತುಸು ಕಷ್ಟವಾಗುತ್ತದೆ. ತಯಾರಿಸಿದ ಮಡಿಕೆ, ಕುಡಿಕೆಗಳು ಬೇಗನೆ ಆರುವುದಿಲ್ಲ. ನಿಧಾನವಾಗಿ ತೇವಾಂಶ ಕಡಿಮೆಯಾಗುವುದಕ್ಕೆ ಹೆಚ್ಚು ಕಾಲ ಬೇಕಾಗುತ್ತದೆ. ಹಾಗೆಯೇ ಸುಂಟರಗಾಳಿಯಲ್ಲಿ ಎದ್ದ ಕಸ, ಧೂಳಿನ ಕಣಗಳು ಕೂಡ ಹೊಸದಾಗಿ ಮಾಡಿಟ್ಟ ಹಸಿ ಮಡಕೆ, ಕುಡಿಕೆಗಳ ಮೇಲೆ ಸುಲಭವಾಗಿ ಬಂದು ಮೆತ್ತಿಕೊಳ್ಳುವ ಸಾಧ್ಯತೆಗಳಿವೆ.

ಅವೆಲ್ಲ ಏನಿದ್ದರೂ ಪ್ರಾಕೃತಿಕ ಶಕ್ತಿಗಳಾದ್ದರಿಂದ ಅವುಗಳ ಬಗ್ಗೆ ಕುಂಬಾರರು ವೃತ್ತಿಯ ಸಲುವಾಗಿ ಎಚ್ಚರವಹಿಸಬೇಕಾಗುತ್ತದೆ.

**ಕುಂಬಾರಿಕೆಗೆ ಬಳಸುವ ಮುಖ್ಯ ಮತ್ತು ಇತರೆ ಸಾಮಾಗ್ರಿಗಳು:**

ನಾವು ಯಾವುದೇ ಕರಕುಶಲ ವೃತ್ತಿಯನ್ನು ಆರಂಭಿಸಿದ ಮೇಲೆ ತಯಾರಿಸಿದ ವಸ್ತುಗಳಿಗೆ ಅವಶ್ಯಕವಾದ ಕಚ್ಚಾ ಮೂಲಸಾಮಾಗ್ರಿಗಳನ್ನು ಬಳಸಬೇಕಾಗುತ್ತದೆ. ಅಂತೆಯೇ ಮಡಿಕೆ ಮಾಡಲು ಕುಂಬಾರರು ಹಲವಾರು ಕಚ್ಚಾ ಸಾಮಾಗ್ರಿಗಳನ್ನು ಬಳಸುತ್ತಾರೆ. ಅವು ಈ ಕೆಳಗಿನಂತಿವೆ.

೧. **ಆವೆಮಣ್ಣು:** ಕುಂಬಾರಿಕೆಗೆ ಮೊದಲನೆಯ ಮತ್ತು ಅತಿಮುಖ್ಯವಾದ ಮೂಲವಸ್ತುವೆಂದರೆ ಮಣ್ಣು. ಈ ಮಣ್ಣು ವಿಶೇಷ ಗುಣಲಕ್ಷಣವಿರುವ ಒಳ್ಳೆಯ ಅಂಟಾಗಿರುವ ಇದನ್ನು "ಆವೆಮಣ್ಣು" ಎಂದು ಕರೆಯುತ್ತಾರೆ. ಇದು ಸಾಧಾರಣ ಭೂಮಿಯ ಮೇಲ್ಪದರದಿಂದ ೪-೫ ಅಡಿ ಆಳದಲ್ಲಿ ದೊರೆಯುತ್ತದೆ. ಎಲ್ಲಾ ಕಡೆಗಳಲ್ಲಿಯೂ ಈ ಮಣ್ಣು ದೊರೆಯುವುದಿಲ್ಲ. ಹೊಳೆಯ ದಡದಲ್ಲಿ ಮತ್ತು ಬಂಜರು ಬಿಟ್ಟಗದ್ದೆಗಳಲ್ಲಿ ಮೇಲ್ಪದರದಲ್ಲೇ ಸಿಗುತ್ತದೆ. ಕೆಲವೆಡೆ ಈ ರೀತಿಯ ಮಣ್ಣು ಸಿಗುತ್ತದೆಯಾದರೂ ಒಳ್ಳೆಯ ಗುಣಮಟ್ಟದ ಮಣ್ಣಿನ ಅಭಾವವಿರುತ್ತದೆ. ಅದೇ ರೀತಿ ಕುಂಬಾರಿಕೆಗೆ ಕಲ್ಲಿರದ ಕಪ್ಪು ನಮೂನೆಯ ಉತ್ತಮವಾದ ಮಣ್ಣುಬೇಕಾಗುವುದು. ಮಣ್ಣು ಸಾಗಿಸಲು ಅನುಕೂಲವಾಗುವ ಮಾರ್ಗದ ವ್ಯವಸ್ಥೆ ಬೇಕಾಗುವುದು. ಅಲ್ಲದೆ ಮಣ್ಣು ಸಿಗುವ ಜಾಗದ ಮಾಲೀಕನ ಒಪ್ಪಿಗೆಯನ್ನು ಪಡೆದು ಮಣ್ಣನ್ನು ಅಗೆದು ಸಾಗಿಸಬೇಕು.

೨. **ಉರುವಲು:** ಎರಡನೆ ಮುಖ್ಯವಾದ ಕುಂಬಾರಿಕೆಯ ಕಚ್ಚಾಸಾಮಾಗ್ರಿ ಕಟ್ಟಿಗೆ, ಕುಡಿಕೆಗಳನ್ನು ಸರಿಯಾದ ವಿನ್ಯಾಸಕ್ಕೆ ತಂದ ಮೇಲೆ ಬೇಯಿಸುವುದು. ಕುಂಬಾರಿಕೆ ಹಂತ, ಇದಕ್ಕೆ ಕಟ್ಟಿಗೆ ಅಗತ್ಯ. ಸಾಮಾನ್ಯವಾಗಿ ಮಣ್ಣಿನ ಪಾತ್ರೆಗಳು ಬೇಯಲು ೧೦ರಿಂದ ೧೨ ಘಂಟೆಗಳ ಸಮಯ ತಗಲುವುದರಿಂದ ಹೆಚ್ಚಾಗಿ ದೊಡ್ಡಮರದ ದಿಮ್ಮಿಗಳ ಅಗತ್ಯವಿರುತ್ತದೆ. ಮಳೆಗಾಲಕ್ಕೆ ಬೇಕಾದ ಉರುವಲನ್ನು ಬೇಸಿಗೆಯಲ್ಲಿಯೇ ತಯಾರಿಸಿಡುವುದು ದಕ್ಷಿಣ ಕನ್ನಡದಲ್ಲಿ ವಾಡಿಕೆಯಾಗಿದೆ. ಕುಂಬಾರಿಕೆಯಲ್ಲಿ ತೊಡಗಿರುವ ಕುಟುಂಬಗಳಿಗೆ ತಮ್ಮದೇ ಆದ ಮರಗಳಿಲ್ಲದಿದ್ದರೆ ಕಟ್ಟಿಗೆಗೆ ದುಬಾರಿ ಬೆಲೆ ತೆತ್ತು ಸಾಗಿಸುವ ವ್ಯವಸ್ಥೆಯನ್ನು ಎದುರಿಸಬೇಕಾಗುತ್ತದೆ. ಮಳೆಗಾಲಕ್ಕೆ ಕಟ್ಟಿಗೆಯನ್ನು ಕೂಡಿಸಲು ಬೇಕಾದ ಕೊಟ್ಟಿಗೆ ಅಗತ್ಯವಾಗಿದ್ದು ಹೊಗೆ ಕಾರುವಾ ತೀರಾ ಕೆಳಮಟ್ಟದ ಮರಗಳು ಕುಂಬಾರಿಕೆಯಲ್ಲಿ ಉಪಯೋಗವಾಗುವುದಿಲ್ಲ.

೩. **ಬೈಹುಲ್ಲು ಸಂಗ್ರಹಣೆ:** ಕುಂಬಾರ ವೃತ್ತಿಗೆ ಕಟ್ಟಿಗೆಯಷ್ಟೇ ಪ್ರಾಮುಖ್ಯ ಬೈಹುಲ್ಲು. ಮಣ್ಣಿನ ಪಾತ್ರೆಗಳನ್ನು ಸುಡಬೇಕಾದರೆ ಅವುಗಳನ್ನು ಬಿಸಿಲಿಗೆ ಒಣಗಿಸಿ, ನಂತರ ವ್ಯವಸ್ಥಿತವಾಗಿ ಜೋಡಿಸಿರುತ್ತಾರೆ. ಸುಡಲು ಪಾತ್ರೆಗಳನ್ನು ಜೋಡಿಸುವಾಗ ಪಾತ್ರೆಗಳು ಒಂದಕ್ಕೊಂದು ತಾಗಿ ಒಡೆದು ಹೋಗದಂತೆ ಎಡೆಗೆ ಬೈಹುಲ್ಲನ್ನು ಜೋಡಿಸುತ್ತಾರೆ.

ಮಂಗಳೂರಿನ ಮಳಲಿ ತೋಕೂರು ಮತ್ತು ಬಂಟ್ವಾಳದ ಮಾಣಿ ಮುಂತಾದೆಡೆಗಳಲ್ಲಿ ಕುಂಬಾರರಿಗೆ ಬೈಹುಲ್ಲಿನ ಸಮಸ್ಯೆ ಅಷ್ಟಾಗಿ ಕಂಡುಬರುವುದಿಲ್ಲ. ಬೆಳ್ತಂಗಡಿಯ ಉಜಿರೆ, ಉಪ್ಪಿನಂಗಡಿ, ಮಂಗಳೂರಿನ ಕುಳಾಯಿ, ಸುರತ್ಕಲ್ ಮುಂತಾದ ಸ್ಥಳಗಳಿಗೆ ಬೈಹುಲ್ಲು ದೂರದಿಂದಲೇ ತರಬೇಕು.

**೪. ಹೊಯ್ಗೆ ಮತ್ತು ಸೇಡಿಮಣ್ಣು:** ಕುಂಬಾರರು ಮಡಕೆಗಳನ್ನು ಮಾಡುವಾಗ ಮಡಕೆಗಳು ನಯವಾಗಿರಲು ಮತ್ತು ಬಿರುಕು ಬಿಡದಿರಲು ಮಣ್ಣಿನ ಜೊತೆಗೆ ಹೊಯ್ಗೆ ಅಥವಾ ಸೇಡಿಮಣ್ಣನ್ನು ಬೆರಸುತ್ತಾರೆ. ಹೊಯ್ಗೆ ತುಂಬಾ ನಯವಾಗಿರುವ ಸಣ್ಣ ಧೂಳಿನಾಕಾರದಲ್ಲಿರುತ್ತದೆ. ಮಾಣಿ, ತೋಕೂರು ಮುಂತಾದ ಕಡೆಯವರು ಧೂಳಿನಾಕಾರದ ಮಣ್ಣನ್ನು ಬಳಸಿದರೆ ನಮ್ಮ ಸೀಮೆಯ ಮಂಡ್ಯ, ಮೈಸೂರು ಪ್ರಾಂತ್ಯದ ಕಡೆಯವರು ಗದ್ದೆಯಲ್ಲಿರುವ ಬಿಳಿಮಣ್ಣು ಮತ್ತು ಹೊಳೆಯ ಬದಿಯಲ್ಲಿ ಸಿಗುವ ಮಣ್ಣನ್ನು ಮಿಶ್ರಮಾಡಿ ಬಳಸುತ್ತಾರೆ.

**೫. ಗಾಜಿನಪುಡಿ:** ಈ ಗಾಜಿನ ಪುಡಿಯನ್ನು ಎಲ್ಲಾ ಕಡೆಯ ಕುಂಬಾರರು ಮಡಕೆ ಮಾಡುವಾಗ ಬಳಸುವುದಿಲ್ಲ. ಕೆಲವು ಕಡೆ ಮಾತ್ರ ಬಳಸುತ್ತಿದ್ದು ಎಲ್ಲಾ ಪಾತ್ರೆಗಳ ರಚನೆಯಲ್ಲಿಯೂ ಅಗತ್ಯವಿಲ್ಲ. ಕೆಲವು ದೊಡ್ಡ ಗಾತ್ರದ ಅದರಲ್ಲಿಯೂ ತುಂಬಾ ದಪ್ಪನಾಗಿ ರಚಿಸಬೇಕಾದ ಸಂದರ್ಭದಲ್ಲಿ ಮಾತ್ರ ಇದನ್ನು ಬಳಸುತ್ತಾರೆ. ಉದಾಹರಣೆಗೆ ದಕ್ಷಿಣ ಕನ್ನಡದಲ್ಲಿ "ತಂದೂರಿ ರೊಟ್ಟಿಗೂಡು" ತಯಾರಿಸಬೇಕಾದರೆ ಕುಪ್ಪಿ ಚೂರನ್ನು ಬಳಸುತ್ತಾರೆ.

**ಕುಂಬಾರಿಕೆ ಪ್ರಕ್ರಿಯೆಯಲ್ಲಿ ಬಳಸುವ ಸಾಧನಗಳು:**

ಪ್ರತಿಯೊಂದು ಕುಲಕಸುಬಿನ ವೃತ್ತಿಯನ್ನು ಆರಂಭಿಸುವಾಗ ಅಲ್ಲಿಯ ಕಚ್ಚಾ ಸಾಮಾಗ್ರಿಗಳ ಜೊತೆಗೆ ಬಳಸುವ ಸಾಧನಗಳು ಅಷ್ಟೇ ಮುಖ್ಯವಾಗಿರುತ್ತವೆ. ಹಾಗೆಯೇ ಕುಂಬಾರಿಕೆಯ ವೃತ್ತಿಯಲ್ಲಿಯೂ ಮಡಿಕೆ, ಕುಡಿಕೆ ಹಾಗೂ ಇನ್ನಿತರೆ ವಸ್ತುಗಳನ್ನು ತಯಾರಿಸುವಾಗ ಕುಂಬಾರರು ಅನೇಕ ಸಾಧನ ಸಾಮಾಗ್ರಿಗಳನ್ನು ಬಳಸುತ್ತಾರೆ. ಅವುಗಳನ್ನು ಈ ಕೆಳಕಂಡಂತೆ ಹೇಳಲಾಗಿದೆ.

**೧. ತಗೋರಿ (ತಿಗುರಿ):** ದೇಶದ ಎಲ್ಲಾ ಕಡೆಗಳಲ್ಲಿಯೂ ಕುಂಬಾರಿಕೆಯಲ್ಲಿ ಬಳಕೆಯಾಗಿರುವ ಏಕೈಕ ಸಾಧನ, ಈ ತಿಗುರಿ. ಹದಮಾಡಿ ಸರಿಯಾದ ಅಂಟಾದ ನಂತರ ಪಾತ್ರೆಗೆ ಬೇಕಾಗುವಷ್ಟು ಮಣ್ಣನ್ನು ತೆಗೆದು ಗುಂಪಾಗಿರುವಂತೆ ಮಾಡಿ ಒಂದೆಡೆ ಇಟ್ಟಿರುತ್ತಾರೆ. ಅನಂತರ ಒಂದೊಂದು ಉಂಡೆಗೂ ಪಾತ್ರೆಗಳ ವಿನ್ಯಾಸವನ್ನು ಈ ಚಕ್ರದ ಸಹಾಯದಿಂದ ಕೊಡುತ್ತಾರೆ. ಪ್ರಾಚೀನ ಕಾಲದಿಂದಲೂ ಈ ಚಕ್ರವನ್ನು ಕುಂಬಾರಿಕೆಯಲ್ಲಿ ಬಳಸುತ್ತಿದ್ದರಿಂದ ಕುಂಬಾರರಿಗೆ ಚಕ್ರಸಾಲಿಗಳು ಎನ್ನುವ ಹೆಸರು

ಇದೆ. ಸರಳ ರೀತಿಯ ಕುಂಬಾರಿಕೆಯಲ್ಲಿ ಮರದ ಚಕ್ರವನ್ನು ಬಳಸುತ್ತಾರೆ. ಇದನ್ನು ತಮ್ಮ ಕೊಟ್ಟಿಗೆಯಲ್ಲಿ ಕುಂಬಾರರು ಒಂದು ಕಡೆ ಸ್ಥಿರವಾಗಿ ನೆಲಗೊಳಿಸಿರುವುದನ್ನು ಕಾಣಬಹುದು. ಹಾಗೂ ಕೆಲವು ಕಡೆ ಜಗುಲಿಯ ಮೇಲೆ ಇಟ್ಟುಕೊಂಡು ಮಡಿಕೆಯನ್ನು ತಯಾರಿಸುತ್ತಾರೆ. ಹಿಂದಿನ ಕಾಲದಲ್ಲಿ ಮರದ ಮತ್ತು ಮಣ್ಣಿನ ಚಕ್ರಗಳನ್ನು ಬಳಸುತ್ತಿದ್ದರು. ಈ ಆಧುನಿಕತೆಯೂ ಯಾವುದೇ ವೃತ್ತಿಯನ್ನು ಬಿಡದು. ಇದರ ಪರಿಣಾಮವಾಗಿ ಮರದ ಚಕ್ರದ ಬದಲು ವಿದ್ಯುಚಾಲಿತ ಕಬ್ಬಿಣದ ಚಕ್ರಗಳು ಕಂಡುಬರುತ್ತಿವೆ. ಆದರೆ ದಕ್ಷಿಣ ಕನ್ನಡದಲ್ಲಿ ಇದರ ಬಳಕೆ ವಿರಳ. ದಕ್ಷಿಣ ಕನ್ನಡ ಜಿಲ್ಲೆಯ ಕುಳಾಯಿಗಳಲ್ಲಿ ಒಂದು ಕುಟುಂಬದವರು ವಿದ್ಯುತ್‌ಚಾಲಿತ ತಿಗರಿಯನ್ನು ಉಪಯೋಗಿಸುತ್ತಾರೆ, ಎಂದು ತಿಳಿದುಬಂದಿದೆ. ಈ ಅಧ್ಯಯನದ ಪ್ರಕಾರ ಕೆಲವು ಜಿಲ್ಲೆಗಳಲ್ಲಿ ಒಂದು ಕುಟುಂಬದವರು ವಿದ್ಯುತ್‌ಚಾಲಿತ ತಿಗುರಿಯನ್ನು ಉಪಯೋಗಿಸುತ್ತಾರೆ ಎಂದು ತಿಳಿಯಬಹುದು.

**೨. ಈಸುಕೋಲು:** ಮಣ್ಣನ್ನು ಹದಮಾಡುವ ಹಂತದಲ್ಲಿ ಮಣ್ಣಿನಿಂದ ಕಸಕಡ್ಡಿಯನ್ನು ಬೇರ್ಪಡಿಸಲು ಉಪಯೋಗಿಸುವ ಸಪೂರದ ತಂತಿ. ಇದು ಒಂದೂವರೆ ಎರಡು ಅಡಿಯಷ್ಟು ಉದ್ದವಿದ್ದ ಅದನ್ನು ಅರ್ಧ ಚಂದ್ರಾಕೃತಿಯಲ್ಲಿ ಭಾಗಿಸಿ ರಾಶಿ ಹಾಕಿದ ಮಣ್ಣಿನಿಂದ ಕಸಕಡ್ಡಿಗಳನ್ನು ತೆಗೆಯಲು ಉಪಯೋಗಿಸುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ಹಾಳಾದ ಛತ್ರಿಯ ಕಡ್ಡಿಗಳನ್ನು ಬಳಸುತ್ತಾರೆ.

**೩. ಪೂಲಿ ಮತ್ತು ಕಲ್ಲ್:** ಕುಂಬಾರರ ವೃತ್ತಿಯಲ್ಲಿ ಈ 'ಪೂಲಿ' ಮತ್ತು ಕಲ್ಲ್ ಅತೀಮುಖ್ಯವಾದ ವಸ್ತುಗಳಾಗಿವೆ. 'ಪೊಲಿ' ಎಂದರೆ ತಿಗರಿಯಲ್ಲಿ ತಿರುಗಿಸಿದ್ದ ಕರಡು ಮಡಕೆಗಳನ್ನು ಹೊಡೆದು ವಿನ್ಯಾಸಕ್ಕೆ ತರಲು ಉಪಯೋಗಿಸುವ ಮರದ ತುಂಡು. ಸಾಮಾನ್ಯವಾಗಿ ಒಂದು ಒರಟಾದ ಇನ್ನೊಂದು ನಯವಾದ ಹೀಗೆ ಎರಡು 'ಪೊಲಿ' (ಮರದ ತುಂಡು)ಗಳಿರುತ್ತವೆ. ಅವುಗಳಲ್ಲಿ ಎರಡನೆಯದನ್ನು ಉತ್ತಮ ಗುಣಮಟ್ಟದ ಮರದಿಂದ ತಯಾರಿಸುತ್ತಾರೆ.

'ಕಲ್ಲ್' ಎಂದರೆ 'ಪೊಲಿ'ಯಿಂದ ಪಾತ್ರೆಯನ್ನು ಹೊಡೆಯುವಾಗ ಪಾತ್ರೆಯ ಒಳಭಾಗದಲ್ಲಿ ಹಿಡಿದುಕೊಳ್ಳುವ ದುಂಡಗಾಗಿ ನಯವಾಗಿರುವ ಕಲ್ಲು. ಇದು ಸಾಮಾನ್ಯವಾಗಿ ಐದುನೂರು ಗ್ರಾಂನಷ್ಟು ಭಾರವಿರುತ್ತದೆ. ಇದನ್ನು ಹೆಚ್ಚಾಗಿ ಕಲ್ಲಿನ ಕೆತ್ತನೆಯ ಕೆಲಸಗಾರರಲ್ಲಿ ಹೇಳಿ ಮಾಡಿಸುತ್ತಾರೆ.

**೪. ತಿಡ್ಡಿ (ಗರಟೆ):** ಅರೆ ಒಣಗಿದ ಮಡಕೆಗಳನ್ನು ಬೇಕಾದ ಆಕಾರಕ್ಕೆ ತರಲು ಒಳಗಡೆಯಿಂದ ಉಜ್ಜಬೇಕಾಗಿರುತ್ತದೆ. ಈ ತರಹ ಉಜ್ಜಲು ನಾಜೂಕುಗೊಳಿಸಿದ ಗರಟೆಯನ್ನು ಉಪಯೋಗಿಸುತ್ತಾರೆ. ಹೆಚ್ಚಾಗಿ ಇದು ಒಳ್ಳೆಯ ಆಕಾರದ ತೆಂಗಿನ ಗೆರಟೆಯೇ ಆಗಿರುತ್ತದೆ. ಈ ಪ್ರಕ್ರಿಯೆಗೆ ತುಳುವಿನಲ್ಲಿ 'ಕಜಕ್ ಪಾಡುನಿ' ಎನ್ನುತ್ತಾರೆ.

ಕಜಕ್ ಪಾಡುನಿ ಅಂದರೆ ಗರಟೆಯನ್ನು ಮಡಿಕೆ ನಾಜೂಕುಗೊಳಿಸಲು ಉಪಯೋಗಿಸುವುದು ಎಂದು ಅರ್ಥ. ಅರೆ ಒಣಗಿದ ಪಾತ್ರೆಗಳ ಮೇಲಿನಿಂದಲೂ ಗರಟೆ ಹಿಡಿದು ಉಜ್ಜುವುದುಂಟು.

ಈ ಮೇಲೆ ಹೇಳಿರುವ ಸಾಧನಗಳೊಂದಿಗೆ "ಆವೆಮಣ್ಣು" ಭೂಮಿಯ ಒಂದೆರಡು ಅಡಿ ಆಳದಲ್ಲಿರುವುದರಿಂದ ತೆಗೆಯಲು ಹಾರೆ, ಪಿಕ್ಕಾಸುಗಳು ಕೂಡಾ ಅಗತ್ಯ. ಸಾಮಾನ್ಯವಾಗಿ ಕೃಷಿ ಕೆಲಸದಲ್ಲಿ ಉಪಯೋಗವಾಗುವ ಹಾರೆ, ಪಿಕ್ಕಾಸು-ಗಳನ್ನೇ ಬಳಸುತ್ತಾರೆ. ಮಾತ್ರವಲ್ಲದೆ ಹೀಗೆ ತೆಗೆದ ಮಣ್ಣನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸಲು 'ಎತ್ತಿನಗಾಡಿ'ಯನ್ನು ಬಳಸುತ್ತಿದ್ದರು. ಈಗೀಗ ಲಾರಿ ಮುಂತಾದ ಘನವಾಹನಗಳನ್ನು ಉಪಯೋಗಿಸುತ್ತಾರೆ. ಪೂರ್ಣಗೊಂಡ ಪಾತ್ರೆಗಳನ್ನು ಮಾರುಕಟ್ಟೆಗೆ ಹೊರಲು ಅಥವಾ ಮನೆಮನೆಗೆ ಹೊತ್ತುಕೊಂಡು ಹೋಗಲು ಎರಡು ರೀತಿಯ ಸಾಧನಗಳನ್ನು ಬಳಸುತ್ತಾರೆ. **'ದಂಡ್'** ಮತ್ತು **'ಪುಡಯಿ'**. 'ದಂಡ್' ಎನ್ನುವುದು ೫ರಿಂದ ೬ ಅಡಿ ಉದ್ದದ ಬಿದಿರು. ಈ ಬಿದಿರಿನ ಒಂದೊಂದು ಬದಿಗೂ ೮ರಿಂದ ೧೦ ಮಡಕೆಗಳನ್ನು ಸಮತೂಕವಾಗುವಂತೆ ಕಟ್ಟಿ ಬಿದಿರಿನ ಮಧ್ಯಭಾಗಕ್ಕೆ ತಲೆಕೊಟು ಹೊರುತ್ತಾರೆ. 'ಪುಡಯಿ' – ಎಂದರೆ ಬಳ್ಳಿಯಿಂದ ಮಾಡಿದ ದೊಡ್ಡ ಬುಟ್ಟಿ. ಇದು ಹೆಚ್ಚಾಗಿ ಸಣ್ಣ ಗಾತ್ರದ ಪಾತ್ರೆಗಳನ್ನು ಹೊರಲು ಉಪಯುಕ್ತ. ಇವುಗಳಲ್ಲಿ ದಂಡು (ಬಿದಿರು) ಪುರುಷರು ಉಪಯೋಗಿಸಿದರೆ, ಎರಡನೆಯನ್ನು (ಪುಡಯ) ಮಹಿಳೆಯರು ಪಾತ್ರೆ ಹೊರಲು ಬಳಸುತ್ತಾರೆ. ಇತ್ತೀಚೆಗೆ ಅಧ್ಯಯನವನ್ನು ಮಾಡಿದಾಗ ಕುಂಬಾರರು ಗೋಣಿಚೀಲಕ್ಕೆ ತುಂಬಿಕೊಂಡು ತಮ್ಮ ಪಕ್ಕದ ಊರುಗಳಿಗೆ ಹೋಗಿ ಮಾರುವುದನ್ನು ಕಾಣುತ್ತೇವೆ.

**ತಯಾರಿಕೆಯ ವಿವಿಧ ಹಂತಗಳು:**

ಪ್ರಾಚೀನ ಕಾಲದಿಂದಲೇ ಆರಂಭಗೊಂಡಿರುವ ಕುಂಬಾರಿಕೆಯು ನಾಗರಿಕತೆಯ ಆದಿಯಿಂದಲೇ ರೂಢಿಯಲ್ಲಿತ್ತು ಎಂಬುದಕ್ಕೆ ಹಲವಾರು ನಿದರ್ಶನಗಳಿವೆ. ಮೊದಮೊದಲು ಸುಡದೇ ಇರುವ ಮಡಿಕೆಗಳನ್ನು ಬೇರೆ ಬೇರೆ ತಮ್ಮ ನಿತ್ಯ ಬಳಕೆಗೆ ಬೇಕಾದ ಗೆಡ್ಡೆ, ಗೆಣಸುಗಳನ್ನು ಹಣ್ಣು ಹಂಪಲುಗಳನ್ನು ಸಂಗ್ರಹಿಸಲು ಬಳಸುತ್ತಿದ್ದರು. ಆಹಾರವನ್ನು ಬೇಯಿಸುವ ಕಲೆಯನ್ನು ತಿಳಿದುಕೊಂಡ ಮೇಲೆ ಸುಟ್ಟ ಮಡಕೆಗಳ ಬಳಕೆ ಪ್ರಾರಂಭವಾಯಿತು. ಇದು ವಿಶ್ವದ ಇಂತಹುದೇ ಪ್ರದೇಶದಲ್ಲಿ ಬೆಳೆದು ಬಂದಿತ್ತೆಂದು ಹೇಳುವುದು ತುಂಬಾ ಕಷ್ಟದ ಕೆಲಸ. ಆದಿಮಾನವ ತಾನು ಎಲ್ಲೆಲ್ಲಿ ನೆಲೆಸಿದ್ದನೋ ಅಲ್ಲಲ್ಲಿ ನಡೆದು ಬಂದ ಪ್ರಕ್ರಿಯೆ ಇದಾಗಿರಬಹುದು. ಭಾರತದ ಕೂಡ ಜಾತಿಯ ವಸ್ತುಗಳ ರೂಪರೇಖೆಗಳ ಸಾವಿರಾರು ವರ್ಷಗಳ ಹಿಂದೆ ಮೂಡಿ ಬಂದು

ಪರಿಷ್ಕರಿಸಲ್ಪಟ್ಟಂತವು. ದಕ್ಷಿಣ ಕನ್ನಡದಲ್ಲಿರುವ ಕುಂಬಾರಿಕೆಯು ಈ ರೀತಿ ನಡೆಯುತ್ತದೆ.

ಮೊದಲು ಆವೆ ಮಣ್ಣನ್ನು ತಂದು ತಮ್ಮ ಮನೆಯ ಮುಂದಿರುವ ಒಂದು ಕೃತಕವಾದ ಹಳ್ಳಕ್ಕೆ ಹಾಕುತ್ತಾರೆ. ನಂತರ ಅದಕ್ಕೆ ನೀರು ಹಾಕಿ ನೆನೆಯಲು ಬಿಡುತ್ತಾರೆ. ಮರುದಿನ ಮಣ್ಣನ್ನು ತೆಗೆದು ಸ್ವಚ್ಛವಾದ ಜಾಗದಲ್ಲಿ ರಾಶಿಹಾಕುತ್ತಾರೆ. ನಂತರ ಅದನ್ನು ಸರಿಯಾದ ಅಂಟಾಗಿಸಿ ಅದರಲ್ಲಿರುವ ಕಸಕಡ್ಡಿಗಳನ್ನು ಈಸುಕೋಲಿನಿಂದ ಸ್ವಲ್ಪ ಸ್ವಲ್ಪವೇ ಎಳೆದುಹಾಕುತ್ತಾರೆ. ಈ ಪ್ರಕ್ರಿಯೆ ಪೂರ್ತಿಯಾದ ನಂತರ ಮಣ್ಣನ್ನು ಹದಮಾಡಿ ತಟ್ಟಿ ಒಂದೊಂದು ಪಾತ್ರೆಗೆ ಬೇಕಾದಷ್ಟು ಮಣ್ಣನ್ನು ಗುಂಡಾಗಿ ಮಾಡಿ ಕೈ ಮತ್ತು ಮಣ್ಣಿನ ಅಂದಾಜಿನಲ್ಲಿ ಚಕ್ರದ ಮೇಲಿಟ್ಟು ತಿರುಗಿಸಿ ಮಡಿಕೆಗಳ ಆಕಾರವನ್ನು ಕೊಡುತ್ತಾರೆ. ಈ ಪ್ರಕ್ರಿಯೆಗೆ ಸಾಮಾನ್ಯವಾಗಿ ಎರಡು ಜನ ಬೇಕಾಗುತ್ತಾರೆ. ಹೆಚ್ಚಾಗಿ ಮಹಿಳೆಯರು ತಿಗರೆಯನ್ನು ತಿರುಗಿಸಿದರೆ ಪುರುಷರು ಚಕ್ರದ ಮಧ್ಯೆ ಮಣ್ಣಿಟ್ಟು ಅದಕ್ಕೆ ಆಕಾರ ಕೊಡುತ್ತಾರೆ. ಹೀಗೆ ಒಣಗಿದ ಪಾತ್ರೆಗಳನ್ನು 'ಬಳೆತುನ' ಎನ್ನುವರು. ಹೀಗೆ ರಚಿಸಲ್ಪಟ್ಟ ಪಾತ್ರೆಗಳನ್ನು ಬಿಸಿಲಿನಲ್ಲಿಟ್ಟು ನಿರ್ದಿಷ್ಟ ಸಮಯದವರೆಗೆ ಒಣಗಲು ಬಿಡುತ್ತಾರೆ. ಹೀಗೆ ಒಣಗಿದ ಪಾತ್ರೆಗಳನ್ನು 'ಕಲ್ಲು' ಮತ್ತು 'ಪೊಲಿ'ಯ ಸಹಾಯದಿಂದ ತಟ್ಟಿ ಸರಿಯಾದ ಆಕೃತಿಕೊಡುತ್ತಾರೆ. ಮಡಿಕೆಗಳು ಆಕರ್ಷಕವಾಗಿರಲು ಅವುಗಳ ಮೇಲೆ ಸಣ್ಣ ಕಲ್ಲಿನಿಂದ ಅಥವಾ ಸಣ್ಣ ಕಡ್ಡಿಯಿಂದ ಬಳ್ಳಿಯ ಅಥವಾ ಹೂವಿನ ಚಿತ್ರಗಳನ್ನು ಬರೆಯುತ್ತಾರೆ. ಕುಂಬಾರನ ಕೈಚಳಕ ಮತ್ತು ನಿಪುಣತೆಯನ್ನು ಅವಲಂಬಿಸಿಕೊಂಡು ಈ ಚಿತ್ರಗಳು ಮಡಕೆಯಿಂದ ಮಡಿಕೆಗೆ ವೈವಿಧ್ಯಮಯವಾಗಿರುತ್ತವೆ.

ಮೇಲಿನ ಪ್ರಕ್ರಿಯೆ ಕೊನೆಗೊಳ್ಳುತ್ತಲೇ ಒಂದು ಪಾತ್ರೆಯಲ್ಲಿ ಆವೆ ಮಣ್ಣಿನ (ನಯವಾದ) ಕೆಸರನ್ನು ತಯಾರಿಸಿಟ್ಟುಕೊಂಡಿರುತ್ತಾರೆ. ಪಾತ್ರೆಯ ಮೇಲೆ ಉಳಿದಿರುವ ಸಣ್ಣಮಟ್ಟ ಗುಳ್ಳೆ ಅನಗತ್ಯವಾಗಿರುವ ಗೆರೆ ತೂತುಗಳು ಮಾಡುವುದಕ್ಕಾಗಿ ಪಾತ್ರೆಗಳ ಮೇಲೆ ನಯವಾಗಿ ಸವರಿ ಮತ್ತೆ ಒಣಗಲು ಬಿಸಿಲಿಗೆ ಬಿಡುತ್ತಾರೆ. ಕುಂಬಾರಿಕೆಯಲ್ಲಿ ಕೊನೆಯ ಮತ್ತು ಪ್ರಾಮುಖ್ಯವಾದ ಹಂತ ಪಾತ್ರಗಳನ್ನು ಸುಡುವುದು. ಕುಂಬಾರ ಕೊಟ್ಟಿಗೆಯಲ್ಲಿ ೧೦ರಿಂದ ೧೫ ಅಡಿ ವ್ಯಾಸವುಳ್ಳ ಒಂದೂವರೆ ಅಡಿ ಆಳದ ಒಂದು ಕೃತಕ ಗುಳಿ ಇರುತ್ತದೆ. ಇದನ್ನು ತುಳುವಿನಲ್ಲಿ ಅವೆ ಎನ್ನುವರು. ಈ ಅವೆಯಲ್ಲಿ ಎರಡು ವಿಧ.

೧. ಓಳಿಯ ಅವೆ

೨. ಸಾಮಾನ್ಯ ಅವೆ.

'ಓಳಿಯ ಅವೆ'ಯು ೧೫ರಿಂದ ೨೦ ಅಡಿ ಉದ್ದ ಮತ್ತು ೬ರಿಂದ ೮ ಅಡಿ ಅಗಲವಿರುವ ಆಯತಾಕಾರದ ಅವೆ. ಸಾಮಾನ್ಯ ಅವೆ ವೃತ್ತಾಕಾರವಾಗಿದ್ದು, ಅಗಲ ೧೦ರಿಂದ ೧೫ ಅಡಿ ಇರುತ್ತದೆ. ದಕ್ಷಿಣ ಕನ್ನಡದಲ್ಲಿ ಹೆಚ್ಚಾಗಿ ಈ ಸಾಮಾನ್ಯ ಅವೆಯನ್ನು ಬಳಸಿಕೊಳ್ಳುತ್ತಾರೆ. ಮೊದಲು ಈ ರಚನೆಯ ಒಳಗಡೆ ಕಟ್ಟಿಗೆಯನ್ನು ಉರಿಯಲು ಅನುಕೂಲವಾಗುವಂತೆ ಜೋಡಿಸುತ್ತಾರೆ. ಅದರ ಮೇಲೆ ಕಟ್ಟಿಗೆಯ ಹುಂಡಿಯನ್ನು ಚೆನ್ನಾಗಿ ಪಸರಿಸಿ ಮೊದಲು ದೊಡ್ಡ ಮಡಿಕೆಗಳನ್ನು ಅನಂತರ ಸಣ್ಣದ್ದನ್ನು ಒಂದೊಂದನ್ನೇ ವ್ಯವಸ್ಥಿತವಾಗಿ ಕಟ್ಟಿಗೆಯ ಮೇಲೆ ಜೋಡಿಸುತ್ತಾರೆ. ಪಾತ್ರೆಗಳು ಒಂದಕ್ಕೊಂದು ತಾಗಿ ಬಿರುಕು ಬಿಡದಂತೆ ಪಾತ್ರೆಗಳ ಮಧ್ಯೆ ಬೈಹುಲ್ಲಿನ ಬಂಡೆಗಳನ್ನು ಉಪಯೋಗಿಸುತ್ತಾರೆ. ಮೇಲಕ್ಕೆ ಬಂದಂತೆ ಸಣ್ಣ ಹಣತೆ, ಹರವಿ ಇತ್ಯಾದಿಗಳನ್ನು ಕೂರಿಸಿ ಅದರ ಮೇಲೆ ದಪ್ಪನೆಯ ಬೇಹುಲ್ಲನ್ನು ಹಾಸುತ್ತಾರೆ. ಬೆಂಕಿಯ ಜ್ವಾಲೆ ಪಾತ್ರೆಗಳ ಎಡೆಯಿಂದ ಹೊರಕ್ಕೆ ತೂರಿಕೊಳ್ಳದಂತೆ ಬೈಹುಲ್ಲಿನ ಮೇಲೆ ಕೆಸರನ್ನು ದಪ್ಪಗೆ ಸವರುತ್ತಾರೆ. ಪಾತ್ರೆ ಸುಡುವ ಗುಂಡಿಯ ಸುತ್ತಲೂ ಸಾಮಾನ್ಯವಾಗಿ ಮಣ್ಣಿನ ಗೋಡೆ ಇರುತ್ತದೆ. ಗೋಡೆ ಇಲ್ಲದೇ ಅವೆ ಆದಲ್ಲಿ ಪಾತ್ರೆಗಳನ್ನು ಜೋಡಿಸಿದ ನಂತರ ಸುತ್ತಲೂ ಬೈಹುಲ್ಲು ಮತ್ತು ಹಸಿರು ಮಣ್ಣಿನ ಹೊದಿಕೆಯನ್ನು ಹಾಕುತ್ತಾರೆ. ಪಾತ್ರೆಗಳನ್ನು ಜೋಡಿಸುವಾಗಲೇ ಎದುರುಗಡೆ ಬೆಂಕಿ ಹಾಕಲು ಅನುಕೂಲವಾಗುವಂತೆ ಅವೆಯ ತಳಭಾಗದಲ್ಲಿ ಖಾಲಿಬಿಟ್ಟಿರುತ್ತಾರೆ. ಈಗ ಮೆಲ್ಲನೆ ಆ ಜಾಗದಲ್ಲಿ ಬೆಂಕಿ ಹಚ್ಚುತ್ತಾರೆ. ಬೆಂಕಿ ಹಚ್ಚಿ ಸಾಧಾರಣ ಆರು ಗಂಟೆಗಳ ನಂತರ ಅಲ್ಲಲ್ಲಿ ತೊಳುವೆಗಳನ್ನು ಒಂದೊಂದಾಗಿ ತೆರೆಯುತ್ತಾರೆ. ಎಲ್ಲಾ ರಂಧ್ರಗಳನ್ನು ತೆರೆದು ಬಿಟ್ಟು ಬೆಂಕಿ ಎಲ್ಲಾ ಪಾತ್ರೆಗಳಿಗೂ ಹರಿಯಲುಬಿಡುತ್ತಾರೆ. ಮಡಿಕೆಗಳನ್ನು ಸುಡಲು ೧೦ರಿಂದ ೧೨ ಗಂಟೆ ತಗಲಿದರೆ ಒಟ್ಟು ಈ ಆವೆಯ ಪ್ರಕ್ರಿಯೆಗೆ ೨೪ ತಾಸು ತಗಲುತ್ತದೆ. ಕುಂಬಾರರು ಈ ದಿನಗಳಲ್ಲಿ ನಿದ್ದೆ ಊಟ ಬಿಟ್ಟು ದುಡಿಯುತ್ತಿರುತ್ತಾರೆ. ಬೆಂಕಿ ಪೂರ್ತಿಯಾಗಿ ನಂದಿಹೋದ ನಂತರ ಪಾತ್ರೆಗಳನ್ನು ಹೊರತೆಗೆಯುತ್ತಾರೆ.

ಮಣ್ಣನ್ನು ತಂದು ಅಂಟು ಮಾಡುವಲ್ಲಿಂದ ಪಾತ್ರೆಗಳನ್ನು ಸುಟ್ಟು ಹೊರತೆಗೆಯಬೇಕಾದರೆ ಒಂದು ತಿಂಗಳ ಶ್ರಮಬೇಕಾಗಿದ್ದು ಕುಂಬಾರನ ಶ್ರಮದ ಪ್ರತಿಫಲ ಪೂರ್ತಿಯಾಗಿ ಪಾತ್ರೆಗಳನ್ನು ಹೊರತೆಗೆದ ನಂತರವೇ ತಿಳಿಯಬೇಕಷ್ಟೇ. ಏಕೆಂದರೆ ಪಾತ್ರೆಗಳನ್ನು ಬೇಯಿಸುವ ಅಥವಾ ಒಣಗಿಸುವ ಪ್ರಕ್ರಿಯೆ ಹೆಚ್ಚು ಕಡಿಮೆಯಾದಲ್ಲಿ ರಾಶಿಯಲ್ಲಿದ್ದ ಅಷ್ಟೂ ಪಾತ್ರೆಗಳು ಒಡೆದು ಹೋಗುವುದುಂಟು. ಒಟ್ಟಿನಲ್ಲಿ ಅನುಭವೀ ಕುಂಬಾರರ ಪ್ರಕಾರ ಕುಂಬಾರಿಕೆ ಓರ್ವನ ಅದೃಷ್ಟವನ್ನು ಅವಲಂಬಿಸಿದೆ.

**ಕುಂಬಾರಿಕೆಗಿರುವ ಮೂಲ ಸಮಸ್ಯೆಗಳು:**

ಕುಂಬಾರಿಕೆಯು ಮೂಲತಃ ಲಾಭದಾಯಕವಲ್ಲದ ತುಂಬಾ ನಷ್ಟವನ್ನು ಅನುಭವಿಸುವ ವೃತ್ತಿಯಾಗಿದ್ದು, ಇತ್ತೀಚಿನ ದಿನಗಳಲ್ಲಂತೂ ಕುಂಬಾರಿಕೆಯು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿದೆ. ಎಲ್ಲಾ ದಿನಬಳಕೆಯ ವಸ್ತುಗಳು ದಿನೇ ದಿನೇ ಬೇಡಿಕೆಯ ಜೊತೆಗೆ ಬೆಲೆಯನ್ನು ಹೆಚ್ಚು ಹೆಚ್ಚು ಹೊಂದುತ್ತಾ ಹೋದರೆ ಕುಂಬಾರರು ತಯಾರಿಸುವ ವಸ್ತುಗಳಾದ ಮಡಿಕೆ, ಕುಡಿಕೆಗಳ ಬೆಲೆ ಇಳಿಯುತ್ತಿದೆ. ರಾಜ್ಯದ ಎಲ್ಲಾ ಕಡೆಯ ಕುಂಬಾರ ಸಹಕಾರಿ ಸಂಘಗಳಿದ್ದರೂ ಸರಿಯಾದ ಅನುಕೂಲತೆಗಳಿಲ್ಲದ ಕಾರಣ ತಯಾರಿಸಿದ ವಸ್ತುಗಳಿಗೆ ಸೂಕ್ತ ಬೆಲೆ ಪಡೆಯುವುದು ಕಷ್ಟವಾಗಿದೆ. ಕುಂಬಾರರು ಕೆಲವು ತಾಂತ್ರಿಕ ಮತ್ತು ಮೂಲ ಸಮಸ್ಯೆಗಳನ್ನು ಎದುರಿಸುತ್ತಿರುವುದನ್ನು ಕಾಣಬಹುದು. ನಮ್ಮ ಕರ್ನಾಟಕ ಸರ್ಕಾರವು ಇಂತಹ ಕೈಕಸುಬು ವೃತ್ತಿಗಾರರಿಗೆ ಸಹಾಯ ನೀಡದೇ ಅವನತಿಯ ಕಡೆಗೆ ಜರುಗುತ್ತಿರುವ ವೃತ್ತಿಗಳನ್ನು ಮತ್ತು ಮರೆಯಾಗುತ್ತಿರುವ ಜನಪದೀಯ ಕಸುಬುಗಳನ್ನು ಗಮನಿಸಬೇಕಾಗಿದೆ. ಕುಂಬಾರರು ಎದುರಿಸಿರುವ ಸಮಸ್ಯೆಗಳಲ್ಲಿ ಮುಖ್ಯವಾಗಿ ಈ ಕೆಳಗಿನಂತೆ ವಿವೇಚಿಸಬಹುದು.

**ಉತ್ತಮ ಗುಣಮಟ್ಟದ ಮಣ್ಣಿನ ಕೊರತೆ:**

ಕರ್ನಾಟಕದಲ್ಲಿ ಕುಂಬಾರಿಕೆಗೆ ಬೇಕಾಗಿರುವ ಮಣ್ಣಿನ ಅಭಾವವು ತುಂಬಾ ಕಂಡುಬರುತ್ತಿದ್ದು, ಎಲ್ಲಾ ಕಡೆಯು ಮಣ್ಣಿನಿಂದ ಮಡಿಕೆಗಳನ್ನು ತಯಾರಿಸಲು ಸಾಧ್ಯವಿಲ್ಲ. ಕೆಳಮಟ್ಟದ ಮಣ್ಣಿನಿಂದ ತಯಾರಿಸಿದ ಮಡಿಕೆಗಳು ಹೆಚ್ಚು ಬಾಳಿಕೆ ಬರುವುದಿಲ್ಲ. ಒಂದು ವೇಳೆ ಮಣ್ಣು ದೊರೆತರೂ ಮಡಕೆಗಳನ್ನು ತಯಾರಿಸುವುದು ಸಾಧ್ಯವಿಲ್ಲ. ಕುಂಬಾರಿಕೆಗೆ ಕಲ್ಲಿರದ ಕಪ್ಪು ನಮೂನೆಯ ಉತ್ತಮವಾದ ಮಣ್ಣು ಬೇಕಾಗುವುದು.

ಕುಂಬಾರಿಕೆಗೆ ಬೇಕಾಗುವಂತಹ ಮಣ್ಣು ಎಲ್ಲಾ ಕಡೆ ದೊರೆಯುವುದು ಕಷ್ಟ. ಒಂದು ವೇಳೆ ಮಣ್ಣು ದೊರೆತರೂ ಅಂತಹ ಸ್ಥಳಗಳಲ್ಲಿ ಮಣ್ಣು ತರಲು ಅಡ್ಡಿ ಮಾಡುವ ಜನರಿಗೇನೂ ಕೊರತೆಯಿಲ್ಲ. ಒಂದು ಕಡೆಯಿಂದ ಸ್ವಲ್ಪ ಮಣ್ಣು ಒಟ್ಟುಮಾಡಿ ಇನ್ನೊಂದು ಕಡೆಯಿಂದ ಇದಕ್ಕೆ ಸೇರಿಸಿಕೊಂಡು ಬರಬೇಕಾದ ಸಂದರ್ಭಗಳು ಇರುತ್ತದೆ. ಇದಲ್ಲದೆ ಮಣ್ಣನ್ನು ಒಂದು ಕಡೆಯಿಂದ ಕುಂಬಾರನ ಮನೆಗೆ ಸಾಗಿಸುವುದು ಇನ್ನೊಂದು ಸಮಸ್ಯೆ. ಎತ್ತಿನ ಗಾಡಿಗಳು ಮಾಯವಾಗುತ್ತಿರು-ವುದರಿಂದ ಘನವಾಹನಗಳಿಗೆ ದುಬಾರಿ ಬಾಡಿಗೆ ತೆತ್ತು ಸಾಗಿಸಬೇಕಾಗುತ್ತದೆ.

**ಅಕಾಲಿಕ ಮಳೆ ಮತ್ತು ಅತಿವೃಷ್ಟಿ:**

ಕುಂಬಾರಿಕೆ ಮಾಡಲು ಯೋಗ್ಯವಾದದು ಬೇಸಿಗೆ ಕಾಲ. ಇದಕ್ಕೆ ಬಿಸಿಲು ತುಂಬಾ ಅಗತ್ಯವಾಗಿರಬೇಕು. ಮೋಡ ಕವಿದ ವಾತಾವರಣವಿದ್ದರೆ ಯೋಜಿತ ಸಮಯಕ್ಕೆ ಪಾತ್ರೆಗಳು ಒಣಗುವುದಿಲ್ಲ. ಸಮಯಕ್ಕೆ ಸರಿಯಾಗಿ ಪಾತ್ರೆಗಳು ಒಣಗದಿದ್ದರೆ, ಪಾತ್ರೆಗಳನ್ನು ಸುಡುವುದು ಕಷ್ಟಕರವಾಗುತ್ತದೆ. ಇದಕ್ಕೆ ಪರ್ಯಾಯ ವ್ಯವಸ್ಥೆ ಇಂದಿಗೂ ಬಂದಿಲ್ಲ. ಅಕಾಲದಲ್ಲಿ ಮಳೆಯಾದರೆ ಕುಂಬಾರನ ಗೋಳು ತೀರದು. ಏಕೆಂದರೆ ಬೇಸಿಗೆಯಲ್ಲಿಯೇ ೩೫ರಿಂದ ೪೦ ದಿನಗಳು ಬೇಕಾಗಿರು- ವುದರಿಂದಾಗಿ ಮಳೆಯಾದರೆ ಕುಂಬಾರಿಕೆಗೆ ಕೊಡಲಿ ಏಟೇ ಸರಿ.

**ಕಟ್ಟಿಗೆಯ ಸಮಸ್ಯೆ:**

ಕುಂಬಾರಿಕೆಯಲ್ಲಿ ಕಟ್ಟಿಗೆಯ ಸಮಸ್ಯೆ ಎದ್ದು ಕಾಣುತ್ತದೆ. ಏಕೆಂದರೆ ಸಿದ್ಧವಾದ ಪದಾರ್ಥವನ್ನು ಗಟ್ಟಿಗೊಳಿಸಲು ಸುಡಬೇಕು. ಆಗ ಮಡಿಕೆ ಕುಡಿಕೆಗಳು ಗಟ್ಟಿಗೊಂಡು ದೀರ್ಘಕಾಲದವರೆಗೆ ಬಳಕೆಗೆ ಬರುತ್ತವೆ. ಹೀಗೆ ಮಡಕೆಗಳನ್ನು ಸುಡಲು ಮರಗಳು ಬೇಕು. ಕುಂಬಾರರಿಗೆ ತಮ್ಮ ಭೂಮಿಯ ವ್ಯಾಪ್ತಿಯಲ್ಲಿಯೇ ಸಾಕಷ್ಟು ಮರಗಳಿದ್ದರೆ ತುಂಬಾ ಅನುಕೂಲ. ಕುಂಬಾರಿಕೆಯಲ್ಲಿರುವ ಹೆಚ್ಚಿನ ಕುಟುಂಬಗಳು ಭೂರಹಿತ ಕುಟುಂಬಗಳೇ ಆದುದರಿಂದ ಉರುವಲು ಎಷ್ಟೇ ದುಬಾರಿಯಾದರೂ ಹಣಕೊಟ್ಟು ಪಡೆಯಬೇಕಾಗಿದೆ. ಕೆಲವು ಕಡೆ ಕುಂಬಾರರು ತೆಂಗಿನಗರಿಯನ್ನು ಕೊಂಡು ಅದರಿಂದ ಮಡಕೆ ಸುಡುತ್ತಾರೆ. ಕೆಲವು ಮನೆಗಳಲ್ಲಿ ಕಟ್ಟಿಗೆಯ ರಾಶಿ ಹಾಕಲು ಕೊಟ್ಟಿಗೆಯ ವ್ಯವಸ್ಥೆ ಇರುವುದಿಲ್ಲ. ಅದೆಷ್ಟೋ ಕುಟುಂಬಗಳು ಈ ಸಮಸ್ಯೆಗಳನ್ನು ಎದುರಿಸುವ ಶಕ್ತಿ ಇಲ್ಲದೆ ಮಳೆಗಾಳದಲ್ಲಿ ಕೂಲಿ ಕೆಲಸವನ್ನು ಅವಲಂಬಿಸಿ ನಗರದ ಕಡೆ ಗುಳೆ ಬರುವುದನ್ನು ನಾವು ಕಾಣುತ್ತೇವೆ.

**ದುಬಾರಿ ಬೈಹುಲ್ಲು:**

ಇತ್ತೀಚಿನ ದಿನಗಳಲ್ಲಿ ಕುಂಬಾರರಿಗೆ ಬೈಹುಲ್ಲಿನ ಸಮಸ್ಯೆ ಅತ್ಯಂತ ದೊಡ್ಡ ಸಮಸ್ಯೆಯಾಗಿದೆ. ಏಕೆಂದರೆ ದನಕರುಗಳಿಗೆ ಮೇವಿಗೆ ಪರದಾಡುತ್ತಿರುವ ಈ ಕಾಲದಲ್ಲಿ ಕುಂಬಾರಿಕೆಗೆ ಬೈಹುಲ್ಲನ್ನು ಉಪಯೋಗಿಸುವುದೊಂದು ಸಾಧನೆಯೇ ಸರಿ. ಆದರೆ ದಿನ ಕಳೆದಂತೆಲ್ಲಾ ಬೈಹುಲ್ಲಿನ ಬೆಲೆ ಆಕಾಶಕ್ಕೇರಿದ್ದು, ಕುಂಬಾರಿಕೆಯಿಮದ ಜನ ದೂರವಾಗುವುದಕ್ಕೆ ಇದು ಒಂದು ಕಾರಣ. ಬೈಹುಲ್ಲನ್ನು ಸಾಗಿಸುವುದು ಇದಕ್ಕೆ ಸಂಬಂಧಿಸಿದ ಮತ್ತೊಂದು ಸಮಸ್ಯೆಯಾಗಿದೆ.

**ಆವೆ ಮತ್ತು ಆಳು:**

ಕುಂಬಾರಿಕೆಗೆ ಮನೆಯವರೇ ಅಲ್ಲದೆ ಹೆಚ್ಚುವರಿ ಆಳಿನ ಅವಶ್ಯಕತೆ ಇರುತ್ತದೆ. ನಗರಗಳೊಂದಿಗೆ ಹಳ್ಳಿಗಳಲ್ಲಿಯೂ ದಿನಕೂಲಿ ಇದ್ದಕ್ಕಿದ್ದಂತೆಯೇ ಹೆಚ್ಚುತ್ತಿರುವುದನ್ನು ನಾವು ಕಾಣುತ್ತೇವೆ. ದೊಡ್ಡ ಗಾತ್ರದ ಮಡಕೆಗಳನ್ನು (ಗುಡಾಣ ಅಥವಾ ಕಪ್ಪಲ್ ಇತ್ಯಾದಿ) ತಯಾರಿಸುವ ದಿನಗಳಲ್ಲಿ ಮಾತ್ರವಲ್ಲದೆ ಕಟ್ಟಿಗೆಗೆ ಬೇಕಾದ ಮರಗಳನ್ನು ಸಾಗಿಸುವ ಮತ್ತು ಆವೆ ಹಾಕುವ ದಿನಗಳಲ್ಲಿ ಆಳಿನ ಅಗತ್ಯ ಹೆಚ್ಚಿರುತ್ತದೆ. ಆವೆ ಹಾಕುವ ದಿನಗಳಲ್ಲಿ ಎಷ್ಟು ಅಗತ್ಯವಿರುತ್ತದೆಯೆಂದರೆ ಈ ದಿನಗಳಲ್ಲಿ ಮನೆಗೆ ಅತಿಥಿಗಳಿದ್ದರೆ ಅವರೂ ಕೈ ಜೋಡಿಸಬೇಕಾಗುತ್ತದೆ. ಈ ಹೆಚ್ಚಿನ ಸಮಯದಲ್ಲಿ ಶಾಲೆಗೆ ಹೋಗುತ್ತಿರುವ ಮಕ್ಕಳನ್ನು ದುಡಿಸುವುದುಂಟು. ಇದರಿಂದಾಗಿ ಶಿಕ್ಷಣ ವಂಚಿತ-ರಾದವರೂ ಇದ್ದಾರೆ.

**ಹೊಯ್ಗೆಯ ಸಾಗಾಟ:**

ತೆಳ್ಳಗಿನ ನಯವಾದ ಹೊಯ್ಗೆ ಕುಂಬಾರಿಕೆಗೆ ಅಗತ್ಯ. ಇದು ಎಲ್ಲಾ ಕಡೆಗಳಲ್ಲಿಯೂ ಸಿಗುವುದಿಲ್ಲ. ಇದನ್ನು ಒಟ್ಟು ಮಾಡುವುದು ಮತ್ತು ಸಾಗಿಸುವುದು ಕಷ್ಟದ ಕೆಲಸ. ಹೊಯ್ಗೆಯನ್ನು ಹೊತ್ತು ತರುವುದೇ ಹೆಚ್ಚು ಪ್ರಯಾಸದ ಕೆಲಸ. ಲವಣಾಂಶವಿರುವ ಹೂಯ್ಗೆಯನ್ನು ಹುಡುಕಿ ತರಬೇಕಾಗುತ್ತದೆ.

**ಕುಗ್ಗುತ್ತಿರುವ ಬೇಡಿಕೆ:**

ಇತ್ತೀಚಿನ ದಿನಗಳಲ್ಲಿ ಆಧುನಿಕಯುಗ ಬಹಳ ವೇಗವಾಗಿ ಬೆಳೆಯುತ್ತಿದೆ. ನಮ್ಮ ಹಿಂದಿನವರು ಬೆಳೆಸಿಕೊಂಡು ಬಂದಿರುವಂತಹ ಸಂಪ್ರದಾಯವಾಗಲೀ, ವಸ್ತುಗಳೇ ಆಗಲಿ ನಮ್ಮೆದುರಿಗೆ ಕಣ್ಮರೆಯಾಗುತ್ತಿರುವುದನ್ನು ನೋಡಬಹುದು. ಇಂತಹ ಸಂದರ್ಭದಲ್ಲಿ ಕುಂಬಾರ ಕಷ್ಟಪಟ್ಟು ತಯಾರಿಸಿದ ಮಡಕೆಗಳಿಗೆ ಒಂದೇ ರೀತಿಯ ಬೇಡಿಕೆ ಇರುವುದಿಲ್ಲ. ಇವುಗಳಿಗೆ ಬೆಲೆ ನಿಗದಿಪಡಿಸುವುದು ಇನ್ನೊಂದು ಸಮಸ್ಯೆ. ಹಿಂದಿನ ಕಾಲದಲ್ಲಿ ಮಡಕೆಗಳನ್ನು ಮನೆಮನೆಗೆ ಹೊತ್ತು ತಿರುಗುತ್ತಿದ್ದರು. ಈಗ ದಿನವಿಡೀ ತಿರುಗಾಡಿದರೂ ಕೆಲವೇ ಮಡಕೆಗಳು ಮಾರಾಟವಾಗುತ್ತಿದ್ದು ಅವರ ಶ್ರಮಕ್ಕೆ ತಕ್ಕ ಪ್ರತಿಫಲ ಸಿಗುತ್ತಿರಲಿಲ್ಲ. ಈ ರೀತಿ ಹೊತ್ತುಕೊಂಡು ದೂರದ ಊರಿಗೆ ಹೋಗಬೇಕಾದುದರಿಂದ ಕತ್ತಲಾದಾಗ ಅಪರಿಚಿತರ ಮನೆಯಲ್ಲಿಯೇ ಉಳಿದು-ಕೊಳ್ಳಬೇಕಾದ ಸಂದರ್ಭಗಳು ಬರುತ್ತವೆ. ಇತ್ತೀಚಿನ ದಿನಗಳಲ್ಲಿ ಕೆಲವೇ ಮಡಿಕೆಗಳಿಗೆ ಬೇಡಿಕೆ ಇರುವುದರಿಂದ ಕುಂಬಾರಿಕೆಯಂತಹ ಗ್ರಾಮೀಣ ಸಮಾಜದ ಶ್ರೀಮಂತ ಸಂಸ್ಕೃತಿ ಅಪಾಯದ ಅಂಚಿಗೆ ಸಾಗಿದೆ.

**ಮಹಿಳೆಯರ ಪಾತ್ರ:**

ಕುಂಬಾರಿಕೆಯಲ್ಲಿ ಮಹಿಳೆಯರ ಪಾತ್ರವು ಪುರುಷರಷ್ಟೇ ಪ್ರಾಮುಖ್ಯವಾದದ್ದು. ಹಿಂದಿನ ಕಾಲದಿಂದಲೂ ಗುಡಿಕೈಗಾರಿಕೆಗಳಲ್ಲಿ ಮಹಿಳೆಯರು ಶ್ರಮಿಸಿದ್ದು ಮತ್ತು ಗಳಿಸಿರುವುದನ್ನು ಕಾಣಬಹುದು. ಕುಂಬಾರಿಕೆಯಲ್ಲಿಯೂ ಮಣ್ಣುಕೊಡವಲ್ಲಿಂದ ಹಿಡಿದು ಮಡಕೆಗಳ ಮಾರಾಟದವರೆಗೆ ಎಲ್ಲಾ ಕೆಲಸಗಳಲ್ಲಿಯೂ ಪಾಲ್ಗೊಳ್ಳುತ್ತಾರೆ. ಮುಖ್ಯವಾಗಿ ಮಡಕೆಗೆ ರೂಪುಕೊಡುವಾಗ ತಿಗರಿಯನ್ನೇ ಮಹಿಳೆಯರೇ ತಿರುಗಿಸುತ್ತಾರೆ. ಇದು ಕುಂಬಾರಿಕೆಯಲ್ಲಿ ಅತ್ಯಂತ ಸುಲಭದ ಮತ್ತು ಪ್ರಾಮುಖ್ಯತೆಯ ಚಟುವಟಿಕೆ. ಕುಂಬಾರಿಕೆಯಲ್ಲಿ ನುರಿತ ಮಹಿಳೆಯಾದರೆ ಮಡಕೆಗಳಿಗೆ ರೂಪುಕೊಡುವ ಕೆಲಸ ಮಾಡುತ್ತಾರೆ. ಇದರೊಂದಿಗೆ ಮಣ್ಣು ಹೊರುವುದು. ಕಟ್ಟಿಗೆ ಹೊರುವುದು, ಮಡಕೆಗಳು ಬಿಸಿಲಿನಿಂದ ತೆರೆದ ನಂತರ ತಟ್ಟುವುದು ಮುಂತಾದ ಕೆಲಸಗಳಲ್ಲಿ ತೊಡಗಿರುತ್ತಾರೆ. ವಿಶೇಷವಾಗಿ ಮಹಿಳೆಯರಿಂದಲೇ ಆಗುವ ಕೆಲಸವೆಂದರೆ ಮಣ್ಣಿನ ಕಸಕಡ್ಡಿಗಳನ್ನು ಬೇರ್ಪಡಿಸುವುದು. ಇದು ತುಂಬಾ ಸೂಕ್ಷ್ಮವಾದ ಮತ್ತು ತಾಳ್ಮೆಯ ಕೆಲಸವಾದ್ದರಿಂದ ಮಹಿಳೆಯರಿಗೇ ಸೀಮಿತವಾದ ಕೆಲಸವಾಗಿದೆ.

ಪಾತ್ರೆಗಳ ಮೇಲೆ ಹೂವು, ಬಳ್ಳಿ ಮುಂತಾದ ಚಿತ್ರಗಳನ್ನು ಬರೆಯುವುದ–ರೊಂದಿಗೆ ಮಹಿಳೆಯರು ಪಾತ್ರೆಗಳಿಗೆ ಅಂತಿಮ ಕಳೆಯನ್ನು ಕೊಡುತ್ತಾರೆ. ಮಹಿಳೆಯರು ಸಾಧಾರಣ ೮–೧೦ ವರ್ಷಗಳ ಮೊದಲು ಮಡಕೆಗಳನ್ನು ಹೊತ್ತು ಮಾರಾಟಕ್ಕಾಗಿ ಮನೆಮನೆಗೆ ತಿರುಗುತ್ತಿದ್ದರು. ಮುಕ್ತ ಮಾರುಕಟ್ಟೆಯಲ್ಲಿಯೂ ಮಹಿಳೆಯರು ಪಾತ್ರೆಗಳನ್ನು ಮಾರಾಟಮಾಡುತ್ತಾರೆ.

# ಅಧ್ಯಾಯ – ೫

# ಕುಂಬಾರಿಕೆಯಿಂದ ತಯಾರಿಸಲಾಗುವ ವಿವಿಧ ಬಗೆಯ ಪಾತ್ರೆಗಳು

ಪ್ರಾರಂಭಿಕ ಹಂತವಾದ ಆಹಾರ ಸಂಗ್ರಹಣೆಯ ಹಂತದಲ್ಲಿ ಎಲ್ಲರೂ ಸಂಗ್ರಹಣೆಯಲ್ಲಿ ತೊಡಗಿದ್ದರೆ, ವ್ಯವಸಾಯ ಕ್ರಾಂತಿಯ ನಂತರ ಅನೇಕ ವೃತ್ತಿಗಳು ಹುಟ್ಟಿಕೊಂಡು ವೈವಿಧ್ಯಮಯವಾದ ಸಾಮಾಜಿಕ ಜೀವನ ಆರಂಭವಾಯಿತು. ವೃತ್ತಿಗಂಟಿಕೊಂಡಿರುವ ಸಮುದಾಯಗಳು ಕುಲಕಸುಬು ಹಿಂದೂಧರ್ಮದಿಂದ ನಿರ್ಧರಿತವಾದದ್ದು ಮತ್ತು ಅದನ್ನು ಯಾವ ಕಾರಣಕ್ಕೂ ಬದಲಾಯಿಸಲು ಸಾಧ್ಯವಿಲ್ಲವೆಂದು ತೀರ್ಮಾನಿಸಿದ್ದವು. ಪುರಾತನ ಕಾಲದಿಂದಲೂ ಮಣ್ಣಿನ ಪಾತ್ರೆಗಳು ಉಪಯೋಗದಲ್ಲಿದ್ದು 'ಕುಂಬಾರ' ಜಾತಿಯೂ ಸಹ ಪುರಾತನ ಕಾಲದ್ದು, ಕುಂಭಕಲೆ ಆರಂಭವಾದಂದಿನಿಂದಲೂ ಕುಂಬಾರ ಹತ್ತಾರು ದಿನಬಳಕೆಯ ಮತ್ತು ಜನೋಪಯೋಗಿ ವಸ್ತುಗಳನ್ನು ವಿವಿಧ ವಿನ್ಯಾಸಗಳಲ್ಲಿ ತಯಾರಿಸುತ್ತಿದ್ದರು. ಅವುಗಳನ್ನು ಗೃಹೋಪಯೋಗಿ ಮತ್ತು ಸಾಂಸ್ಕೃತಿಕ ಸಂದರ್ಭದಲ್ಲಿ ಮಾಡುವ ವಸ್ತುಗಳೆಂದು ಎರಡು ಬಗೆಯಾಗಿ ವರ್ಗೀಕರಿಸಲಾಗಿದೆ.

**ಗೃಹೋಪಯೋಗಿ ಪಾತ್ರೆಗಳು:**

**ಕಪ್ಪರ್:** ಭತ್ತದಿಂದ ಅಕ್ಕಿ ತೆಗೆಯುವ ಪ್ರಕ್ರಿಯೆಯ ಮೊದಲ ಹಂತದಲ್ಲಿ ಭತ್ತವನ್ನು ನೆನೆಹಾಕಲು ಉಪಯೋಗಿಸುವ ದೊಡ್ಡಪಾತ್ರೆ. ಪ್ರಾಚೀನ ಕಾಲದಿಂದಲೂ ಶೇಂದಿಯನ್ನು ಶೇಖರಿಸಿಡಲು ಶೇಂದಿ ಅಂಗಡಿಗಳಲ್ಲಿ ಪ್ರಧಾನವಾಗಿ ಇದನ್ನು ಉಪಯೋಗಿಸುತ್ತಾರೆ. ಇದರ ತಳಭಾಗ ಸಮತಲವಾಗಿದ್ದು ಅಗಲವಾದ ಬಾಯಿಯನ್ನು ಹೊಂದಿರುತ್ತದೆ. ದನಕರುಗಳಿಗೆ ಬೇಕಾಗುವ ಅಕ್ಕಚ್ಚು ತುಂಬಿಡಲು ಸಾಮಾನ್ಯವಾಗಿ ಹಟ್ಟಿಯ ಪಕ್ಕದಲ್ಲಿಯೇ ಪಾತ್ರೆಗೆ ಪೆಟ್ಟಾಗದಂತೆ ಮತ್ತು ಹೆಚ್ಚು ಬಾಳ್ವಿಕೆ ಬರುವಂತೆ ಮಣ್ಣಿಗೆ ಅರ್ಧ ಹೂತಿಡುತ್ತಾರೆ.

**ಬಾವಡೆ –(ಮುಚ್ಚಳ)**

ಪಾತ್ರೆಯ ಮುಖಭಾಗಕ್ಕೆ ಸರಿಹೊಂದುವ ಮುಚ್ಚಳವನ್ನು 'ಬಾವಡೆ' ಎನ್ನುತ್ತಾರೆ. ಇವು ವಿವಿಧ ಗಾತ್ರದ ಪಾತ್ರೆಗಳಿಗೆ ಮುಚ್ಚಲು ಅನುಕೂಲವಾಗುವಂತೆ ಬೇರೆ-ಬೇರೆಯಾಗಿ ತಯಾರಿಸುತ್ತಾರೆ. ಇತ್ತೀಚೆಗೆ ಇವು ಸಂಪೂರ್ಣವಾಗಿ ಮಾಯವಾಗುವ ಸ್ಥಿತಿಯಲ್ಲಿವೆ. ಏಕೆಂದರೆ ಮಣ್ಣಿನ ಪಾತ್ರೆಗಳನ್ನು ಜನರು ಅಲ್ಲಲ್ಲಿ ಉಪಯೋಗಿಸಿದರೂ

ಅವುಗಳಿಗೆ ಅಲ್ಯುಮಿನಿಯಂ ಅಥವಾ ಇತರೇ ಲೋಹಗಳ ಮುಚ್ಚಳವನ್ನು ಬಳಸುತ್ತಾರೆ. ಹೀಗಾಗಿ ಬಾವಡೆಯ ತಯಾರಿಯನ್ನು ನಿಲ್ಲಿಸಿದ್ದಾರೆ.

**ರೊಟ್ಟಿದ ಓಡು:** (ಇದು ರೊಟ್ಟಿ ತಯಾರಿಸುವ ಹಂಚು) ಇದು ವಿಶೇಷವಾಗಿ ರೊಟ್ಟಿಮಾಡಲು ಹ ಳ್ಳಿಗಳಲ್ಲಿ ಉಪಯೋಗಿಸುವ ಕಾವಲಿ. ಹಿಂದಿನ ಕಾಲದಲ್ಲಿ ಮುಸ್ಲಿಮರು ಹೆಚ್ಚಾಗಿ ಈ ಪ್ರಕಾರದ ಕಾವಲಿಯನ್ನು ಬಳಸುತ್ತಿದ್ದರು.

**ತೂರಿ:** ಇದು ದೇವಸ್ಥಾನಗಳಲ್ಲಿ ಪೂಜಾ ವಿಧಿಗಳಿಗೆ ಬಳಸುವ ಕಲಶ. ಶವಸಂಸ್ಕಾರದ ಸಮಯದಲ್ಲಿ ಎಷ್ಟೇ ಶ್ರೀಮಂತರಲ್ಲಿಯೂ ಇಂದಿಗೂ ಉಪಯೋಗಕ್ಕೆ ಬರುವ ಮಣ್ಣಿನ ಮಡಕೆಯೆಂದರೆ "ತೂರಿ" ಇದನ್ನು 'ಮುಗಯಿ' ಎಂದು ಕರೆಯುವುದುಂಟು.

**ಕುದುಪೆ:** ಹಾಲು ಬಿಸಿಮಾಡಲು ಬಳಸುತ್ತಿದ್ದ ಸಣ್ಣಗಾತ್ರದ ಮಣ್ಣಿನ ಪಾತ್ರೆ. ಮೊಸರಿನಿಂದ ಬೆಣ್ಣೆ ತೆಗೆಯಲು ಇದೇ ಪಾತ್ರೆಯನ್ನು ಬಳಸುತ್ತಿದ್ದು ಹಾಲು, ಮೊಸರು, ಮಜ್ಜಿಗೆ ಹಾಕಿಡಲೂ ಉಪಯೋಗಿಸುತ್ತಾರೆ. ಇದರಲ್ಲಿ ಹಾಕಿಟ್ಟರೆ ರುಚಿಕರವಾಗಿಯೂ ಮತ್ತು ಉತ್ತಮವಾಗಿಯೂ ಇರುವ ಮೊಸರು ಸಿಗುತ್ತದೆ. ಇದನ್ನು ಕಡೆದರೆ ಒಳ್ಳೆಯ ಮಜ್ಜಿಗೆ ಮತ್ತು ಬೆಣ್ಣೆ ಸಿಗುತ್ತದೆ.

**ತಿಬಲೆ:** (ಹಣತೆ) ಇದು ದೀಪ ಹಚ್ಚಲು ಉಪಯೋಗಿಸುವ ಮಣ್ಣಿನ ಪಾತ್ರೆ. ವಿಶೇಷವಾಗಿ ದೀಪಾವಳಿಯ ಸಮಯದಲ್ಲಿ ಇದರಲ್ಲಿ ದೀಪ ಹಚ್ಚಿಡುತ್ತಾರೆ. ಗೃಹಬಳಕೆಯ ವಸ್ತುಗಳಲ್ಲಿ ತೀರಾಸಣ್ಣ ಗಾತ್ರದಾಗಿದ್ದು ದೀಪಾಲಂಕಾರಕ್ಕೆ ಯೋಗ್ಯ ರೀತಿಯಲ್ಲಿ ಬಳಸಬಹುದಾದಂತಹ ಪಾತ್ರೆ. ಇವುಗಳನ್ನು ಕುಂಬಾರರು ಬಿಡಿಬಿಡಿಯಾಗಿ ಮಾರಾಟ ಮಾಡುವ ಬದಲು ೧೦-೧೨ ಅಥವಾ ೧೫೦ ಸೆಟ್ ಮಾಡಿ ಬೆಲೆ ಹೇಳುತ್ತಾರೆ.

**ನಡಾರೆ (ಒಲೆ):** ಇದೊಂದು ಮಣ್ಣಿನ ಒಲೆ ಹಿಂಬದಿಯಿಂದ ಮುಚ್ಚಿದ್ದು ಎದುರುಗಡೆ ಉರುವಲು ಇಡಲು ಅನುಕೂಲವಾಗುವಂತೆ, ತೆರೆದಿರುತ್ತದೆ. ಕೆಲವು ವರ್ಷಗಳ ಹಿಂದೆ ೨-೪ ಜನರಿರುವ ಸಣ್ಣ ಕುಟುಂಬಗಳಲ್ಲಿ ಇಂತಹ ಒಲೆಯನ್ನು ಬಳಸುತ್ತಿದ್ದರು. ಒಲೆಯ ಹಿಂದಿನಿಂದ ಮುಚ್ಚಿದ್ದರೂ ಬೆಂಕಿಯ ಅನುಕೂಲಕ್ಕೆ ಗಾಳಿ ಸಿಗುವಂತೆ ಮೂರು ಕಡೆ ಸಣ್ಣಗಾತ್ರದ ರಂಧ್ರಗಳಿರುತ್ತದೆ. ಈಗಲೂ ಕೆಲವು ಕುಂಬಾರರ ಮನೆಯಲ್ಲಿ ಮತ್ತು ಇನ್ನೀತರ ಸಮುದಾಯದವರು ಇಂತಹ ಒಲೆಯನ್ನು ಬಳಸುವುದನ್ನು ಕಾಣುತ್ತೇವೆ.

**ಚಟ್ಟಿ(ಕುಂದ):** ಮನೆಯ ಹಾಗೂ ಕಟ್ಟಡಗಳ ಹೊರ ಅಲಂಕಾರಕ್ಕಾಗಿ ಹೂಗಿಡಗಳನ್ನು ನೆಡುವ ಪಾತ್ರೆ. ಇವು ಮಿಕ್ಕುಳಿದ ಪಾತ್ರೆಗಳಿಂದ ಹೆಚ್ಚು ದಪ್ಪನಾಗಿದ್ದು ಅಳತೆಯಲ್ಲಿ ಒಂದು ಒಂದೂವರೆ ಅಡಿ ಆಳವಿರುವ ಭಾರವಾದ ಪಾತ್ರೆ. ಇದರೊಳಗೆ ಮಣ್ಣು ತುಂಬಿ ಗಿಡ ನೆಟ್ಟರೆ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸಲು

ಅನುಕೂಲವಾಗುತ್ತದೆ. ಹೀಗೆ ನೆಟ್ಟ ಗಿಡಗಳಿಗೆ ನಿತ್ಯವು ನೀರು ಹಾಕಬೇಕಾಗಿರು–ವುದರಿಂದ ಚಟ್ಟಿಯಲ್ಲಿ (ಕುಂದ) ಹೆಚ್ಚಾದ ನೀರು ಇಳಿದುಹೋಗುವಂತೆ ಪಾತ್ರೆಯ ಕೆಳಮಗ್ಗುಲಲ್ಲಿ ಒಂದು ಸಣ್ಣ ರಂಧ್ರವಿರುತ್ತದೆ. ಇತ್ತೀಚೆಗೆ ಈ ಕುಂದಗಳಿಗೆ ಹೆಚ್ಚಿನ ಬೇಡಿಕೆಯಿರುವುದರಿಂದ ಹೊಸ ಮಾದರಿಯ ಸಣ್ಣಗಾತ್ರದ ಮನೆಯ ಒಳಗಡೆ ಟೇಬಲಿನ ಮೇಲಿಡುವ ಪಾತ್ರೆಗಳೂ ಮಾರುಕಟ್ಟೆಗೆ ಬಂದಿವೆ. ರಚನೆಯಲ್ಲಿ ಇದು ನೀರು ತುಂಬಿಡಲು ಉಪಯೋಗಿಸುವ ಮರಿಗೆಯಂತೆ ಕಾಣುತ್ತದೆ.

**ಕಡ್ಯ ಅಥವಾ ಕಂದೆಲ್ (ಕೊಡಪಾನ):** ತೆಂಗಿನ ಗಿಡಕ್ಕೆ ನೀರೆರೆಯಲು ಮುಖ್ಯವಾಗಿ ಉಪಯೋಗವಾಗುತ್ತಿದ್ದ ದುಂಡಗಾಗಿರುವ ಮತ್ತು ವೃತ್ತಾಕಾರದ ಸಣ್ಣ ಬಾಯಿಯುಳ್ಳ ಪಾತ್ರೆ. ಕೆಲವು ವರ್ಷಗಳ ಹಿಂದೆ ಹಳ್ಳಿಗಳಲ್ಲಿ ಕಳ್ಳಭಟ್ಟಿ ಸಾರಾಯಿ ತಯಾರಿಕೆಯ ಮೊದಲ ಹಂತಕ್ಕೂ ಇದು ಉಪಯೋಗವಾಗುತ್ತಿತ್ತು, ಎನ್ನಲಾಗಿದೆ.

**ಅಡಕಲಗಡಿಗೆ:** ಒಂದರ ಮೇಲೊಂದು ಏರಿಸಿ ಇಟ್ಟಿರುವ ಗಡಿಗೆ ಹಳೆಯ ಗಡಿಗೆಗಳನ್ನು ದೇವರ ಮನೆಯ ಮೂಲೆಯಲ್ಲಿ ಏರಿಸಿ ಇಟ್ಟಿರುತ್ತಾರೆ. ಅದರಲ್ಲಿ ಹಲಸಂದಿ, ಹುರುಳಿ, ದವಸ ಧಾನ್ಯಗಳನ್ನು ಇಂತಹ ಗಡಿಗೆಯಲ್ಲಿ ಹೆಚ್ಚು ಕಾಲ ಕೆಡದಂತೆ ಶೇಖರಣೆ ಮಾಡಿಕೊಂಡಿರುತ್ತಾರೆ.

**ಹರವಿ:** ಇದು ಮಣ್ಣಿನ ಕೊಡ. ದೊಡ್ಡದಾಗಿದ್ದು ಬಾಯಿ ಕೆಣಪಕ್ಕಿಂತ ಅಗಲ–ವಾಗಿರುತ್ತದೆ. ಕುಡಿಯುವ ನೀರು ತುಂಬಿಡುವುದಕ್ಕೆ ಇದನ್ನು ಉಪಯೋಗಿಸುತ್ತಾರೆ. ಹರವಿಯಲ್ಲಿ ಚಿಕ್ಕ ಹರವಿ, ದೊಡ್ಡಹರವಿಗಳು ಕಂಡುಬರುತ್ತವೆ.

**ಮಂಡೆ(ಗುರ್ಕೆ):** ಇದೊಂದು ನೀರು ತುಂಬಿಡಲು ಮತ್ತು ಸ್ನಾನಗೃಹದಲ್ಲಿ ನೀರು ಬಿಸಿಮಾಡಲು ಉಪಯೋಗಿಸುವ ಗುಡಾಣ. ಕೃಷಿಕರ ಹಣ್ಣಡಿಕೆಯನ್ನು ನೀರಲ್ಲಿ ಹಾಕಿಡಲು ಬಳಸುತ್ತಾರೆ. ಇದು ದುಂಡಾಗಿದ್ದು ೨ರಿಂದ ೩ ಅಡಿ ಎತ್ತರವಿದ್ದು ವೃತ್ತಾಕಾರದ ಬಾಯಿಯುಳ್ಳ ದೊಡ್ಡಗಾತ್ರದ ಪಾತ್ರೆ.

**ಅಗೋಳಿ:** ಇದು ಹಿಂದಿನ ಕಾಲದಲ್ಲಿ ಅನ್ನ ಬೇಯಿಸಲು ಉಪಯೋಗಿಸುತ್ತಿದ್ದ ದೊಡ್ಡ ಪಾತ್ರೆ. ಇದು ವೃತ್ತಾಕಾರದ ಬಾಯಿಯನ್ನು ಹೊಂದಿದ್ದು ದುಂಡಾಗಿರುವ ಪಾತ್ರೆ. ಇದರಲ್ಲಿ ದೊಡ್ಡ ಮತ್ತು ಸಣ್ಣಗಾತ್ರದ ಪಾತ್ರೆಗಳಿರುತ್ತವೆ. ಹಿಂದಿನ ಅವಿಭಕ್ತ ಕುಟುಂಬಗಳಲ್ಲಿ ಈ ಪ್ರಕಾರದ ಪಾತ್ರೆಗಳನ್ನು ಬಳಸುತ್ತಿದ್ದರು.

**ನೀರಡ್ಯರ:** ಕುಡಿಯುವ ನೀರನ್ನು ಶೇಖರಿಸಿಡಲು ಉಪಯೋಗಿಸುವ ಪಾತ್ರೆ. ನೆಲದಲ್ಲಿ ಚೆನ್ನಾಗಿ ಕುಳಿತುಕೊಳ್ಳುವಂತೆ ಇದರ ತಳಭಾಗದಲ್ಲಿ ದಪ್ಪನಾದ ಮಣ್ಣಿನ ಪಟ್ಟಿಯಿರುತ್ತದೆ. ಇದು ಹೆಚ್ಚಾಗಿ ದೊಡ್ಡ ಗಾತ್ರದ್ದೇ ಇರುತ್ತದೆ.

**ಇಸಾಳಿ:** ಮಣ್ಣಿನ ಉದ್ದವಾದ ಕೊಳವೆ. ಅಡಿಗೆ ಮಾಡುವಾಗ ಹೊಗೆ ಮನೆಯ ಮೆಲ್ಲುಡೆಗೆ ಹೋಗಲಿಕ್ಕೆ ಬಳಸುತ್ತಾರೆ.

**ಕುಡಿಕೆ:** ಇದು ಮಣ್ಣಿನಿಂದ ಮಾಡಿರುವ ಚಿಕ್ಕಪಾತ್ರೆ. ಇದನ್ನು ಹೆಚ್ಚಾಗಿ ಪೂಜೆ, ಹಲವು ಸಂಪ್ರದಾಯ, ಆಚರಣೆ ಮುಂತಾದ ಸಂದರ್ಭದಲ್ಲಿ ಇದರ ಬಳಕೆ ಹೆಚ್ಚು ಇರುತ್ತದೆ.

**ಪನ್ನಾಳಿಗೆ:** ಮಣ್ಣಿನಿಂದ ಮಾಡಿರುವ ಕೊಳವೆ. ಮಳೆಯ ನೀರು ಹರಿದುಹೋಗು-ವಂತೆ ಮಾಳಿಗೆಯ ಕುಂಬಿಯಲ್ಲಿ ಪನ್ನಾಳಿಗೆಯನ್ನು ಸಿಗಿಸಿರುತ್ತಾರೆ. ಪ್ರಣಾಳಿಕಾ > ಪನ್ನಾಳಿಕೆ.

**ಮುಚ್ಚಳ:** ಇದು ಗಡಿಗೆ, ಮಡಿಕೆಗಳ ಮೇಲೆ ಮುಚ್ಚುವ ತಟ್ಟೆ.

**ಮಾಳ್ಗಿ ಹಂಚು:** ಮನೆಯ ಮೇಲೆ ಹಾಕುವ ಹಂಚು, ಇದನ್ನು ಕೈಹಂಚುಗಳೆಂದು ಕರೆಯುತ್ತಾರೆ. ಇಂದಿಗೂ ಹಳ್ಳಿಗಳಲ್ಲಿ ಇಂತಹ ಹಂಚುಗಳನ್ನು ಯಥೇಚ್ಛವಾಗಿ ಬಳಸಿರುವುದನ್ನು ಕಾಣುತ್ತೇವೆ. ನೀರು ಸುಲಭವಾಗಿ ಹರಿದುಹೋಗುವಂತೆ ಹಂಚು ಇಳಿಜಾರಾಗಿರುವಂತಿದ್ದು, ಇದರಲ್ಲಿ ಕೆಂಪುಹಂಚು, ಕಪ್ಪುಹಂಚುಗಳನ್ನು ಕಾಣುತ್ತೇವೆ.

**ಕೋರಯಿ:** ಇದು ಅಗಲವಾದ ಮತ್ತು ಕಡಿಮೆ ಆಳದ ಪಾತ್ರೆಯಾಗಿದ್ದು ಅಕ್ಕಿಯನ್ನು ತೊಳೆಯಲು ಮತ್ತು ಅಕ್ಕಿಯಲ್ಲಿ ಬೆರೆತಿರುವ ಕಲ್ಲು, ಹೊಯ್ಗೆಯನ್ನು ಬೇರ್ಪಡಿಸಲು ಉಪಯೋಗಿಸುವ ಪಾತ್ರೆಯಾಗಿದೆ.

**ತಟ್ಟಬಿಸಲೆ:** ಇದು ಗಾತ್ರದಲ್ಲಿ ಸಣ್ಣದಾಗಿದ್ದು ಅಗಲವಾದ ಬಾಯಿಯನ್ನು ಹೊಂದಿರುತ್ತದೆ. ಇದು ಪಲ್ಯ, ಸಾಂಬಾರು ಅದರಲ್ಲೂ ಮೀನು, ಮಾಂಸದ ಸಾರು ತಯಾರಿಸಲು ವಿಶೇಷವಾಗಿ ಉಪಯೋಗಿಸುವ ಪಾತ್ರೆ.

**ಗಡಿಗೆ:** ಇದು ಮಣ್ಣಿನ ಪಾತ್ರೆ ಇದರ ಬಾಯಿ ಅಗಲವಾಗಿದ್ದು ಇದು ಸೋರೆಗಿಂತ ಚಿಕ್ಕದಿರುತ್ತದೆ. ಇದನ್ನು ಕಾಯಿಪಲ್ಲೆ ಮಾಡಲು ಹೆಚ್ಚಾಗಿ ಬಳಸುತ್ತಾರೆ. ಗಡಿಗೆಯಾಕಾರವನ್ನು ಗಮನಿಸಿ ಒಕ್ಕಲಿಗರು ಗಡಿಗೆಗಳಿಗೆ ಬರ್ದಿಕಾಯಿ ಗಡಿಗೆ, ಪುಂಡಿಪಲ್ಲೆ ಗಡಿಗೆ ಮುಂತಾದ ಹೆಸರಿಟ್ಟಿರುತ್ತಾರೆ.

**ರೊಕ್ಕದ ಕುಡಿಕೆ:** ಇದು ನಾಣ್ಯವನ್ನು ಹಾಕುವ ಕುಡಿಕೆ. ಇದರ ಬಾಯಿ ತುಂಬಾ ಚಿಕ್ಕದಿರುತ್ತದೆ. ಈಗ ಇದನ್ನು (ಗೋಲಕ) ಎಂದು ಕರೆಯುತ್ತಾರೆ (ಒಂದು ನಾಣ್ಯ ಹೋಗುವಂತೆ ಮಾತ್ರ).

**ಪಲ್ಲಯಿ/ಗದ್ದವು:** ಇದು ಪ್ರಾಚೀನ ಕಾಲದ ಊಟದ ಬಟ್ಟಲು. ಈಗಲೂ ಗ್ರಾಮೀಣ ಪ್ರದೇಶದಲ್ಲಿ ಬಾಣಂತಿಯರು ಊಟ ಮಾಡಲು ಇಂತಹ ಬಟ್ಟಲನ್ನು ಆ ಕಾಲದಲ್ಲಿ ಉಪಯೋಗಿಸುತ್ತಿದ್ದರು. ಇದರಲ್ಲಿ ದೊಡ್ಡ ಗಾತ್ರ ಎಂದರೆ ಸಾಮಾನ್ಯವಾಗಿ ಊಟಕ್ಕೆ

ಉಪಯೋಗಿಸುವ ಬಟ್ಟಲನ್ನು 'ಪಲ್ಲಯ' ಎಂದರೆ ಸಣ್ಣಮಕ್ಕಳು ಉಪಯೋಗಿಸುವ ಸಣ್ಣ ಗಾತ್ರದ ಬಟ್ಟಲನ್ನು 'ಗದ್ದವು' ಎನ್ನುವುದು ವಾಡಿಕೆ. ಇವುಗಳಲ್ಲಿ ಎರಡನೆಯದನ್ನು ಹಿರಿಯರು ಊಟದ ಸಮಯದಲ್ಲಿ ಪಲ್ಯ, ಸಾರು ಇತ್ಯಾದಿಗಳನ್ನು ಹಾಕಲು ಉಪಯೋಗಿಸಿದರೆ ಕಿರಿಯರಿಗೆ ಗಿಡಮೂಲಿಕೆಯ ಮದ್ದನ್ನು ಹಾಕಿ ಅರೆದು ಕುಡಿಸಲು ಉಪಯೋಗಿಸುತ್ತಿದ್ದರು.

**ಕಾರ್‌ದ ಕಡ್ಯ:** ಇದು ಸಾಮಾನ್ಯವಾಗಿ ಕೊಡಪಾನದಂತೆಯೇ ಇದ್ದು ಅಡಿಭಾಗದಲ್ಲಿ ಮಣ್ಣಿನ ಪಟ್ಟಿ ಇರುತ್ತದೆ. ಇದನ್ನು ಮನೆಯಲ್ಲಿ ನೀರು ತುಂಬಿಡಲು ಬಳಸುತ್ತಾರೆ. ಇದರಲ್ಲಿ ಹಾಕಿಟ್ಟ ನೀರು ತಣ್ಣಗಿರುವುದರಿಂದ ಬೇಸಿಗೆ ಕಾಲದಲ್ಲಿ ಇದರ ಬಳಕೆ ಅಧಿಕವಾಗಿದೆ.

**ತಂದೂರ್ ರೊಟ್ಟಿ ಗೂಡು:** ತಂದೂರಿ ರೊಟ್ಟಿ ತಯಾರಿಸುವುದಕ್ಕಾಗಿಯೇ ಇರುವ ಮಣ್ಣಿನ ಪಾತ್ರೆ. ಇದರ ಅಡಿಭಾಗದಲ್ಲಿ ಕೆಂಡವನ್ನು ಹಾಕುವುದಕ್ಕಾಗಿ ಒಂದು ವಿಶೇಷವಾದ ಅಂತಸ್ತಿರುತ್ತದೆ ಮತ್ತು ಅಡಿಭಾಗವು ತೆರೆದಿದ್ದು ಉಳಿದ ಪಾತ್ರೆಗಳಿಂದ ಭಿನ್ನವಾಗಿರುತ್ತದೆ. ಮಿಕ್ಕುಳಿದ ಪಾತ್ರೆಗಳಿಂದ ದಪ್ಪನಾಗಿದ್ದು ಇದನ್ನು ತಯಾರಿಸುವಾಗ ಕುಪ್ಪಿಚೂರು ಮತ್ತು ಹೊಯ್ಗೆಯನ್ನು ಬಳಸುತ್ತಾರೆ. ದೊಡ್ಡ ದೊಡ್ಡ ಹೋಟೆಲುಗಳಲ್ಲಿ ಇಂದಿಗೂ ಇದೇ ತಂದೂರಿ ರೊಟ್ಟಿಗೂಡನ್ನು ಬಳಸುತ್ತಾರೆ.

**ಕರ:** ಅನ್ನ ಬೇಯಿಸುವ ಪಾತ್ರೆ. ಇದು ಅಗೋಳಿಗಿಂತ ಸಣ್ಣಗಾತ್ರದಾಗಿದ್ದು ಸಣ್ಣ ಮತ್ತು ಅತಿಸಣ್ಣ ಕುಟುಂಬಗಳಲ್ಲಿ ಇದನ್ನೇ ಸಾರ್ವತ್ರಿಕವಾಗಿ ಬಳಸುತ್ತಿದ್ದರು. ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಇದರ ಬಳಕೆಯಿದೆ. ಈ ಪಾತ್ರೆಯಲ್ಲಿ ಬೇಯಿಸಿದ ಅನ್ನ ರುಚಿಕರ ಮಾತ್ರವಲ್ಲ. ಇದೊಂದು ಶ್ರೀಮಂತ ಸಂಸ್ಕೃತಿಯೂ ಕೂಡ ಎಂದು ಗ್ರಾಮೀಣ ಜನರು ತಿಳಿದುಕೊಂಡಿದ್ದಾರೆ. ನಿತ್ಯಬಳಕೆಯ ಅಲ್ಯುಮಿನಿಯಂ, ಸ್ಟೇನ್‌ಲೆಸ್ ಸ್ಟೀಲ್ ಪಾತ್ರೆಗಳನ್ನು ಬಳಸಿದರೂ ಪ್ರತಿವರ್ಷವೂ ಹೊಸ ಅಕ್ಕಿ ಊಟ ಮಾಡುವ ದಿನ ಮಣ್ಣಿನ ಪಾತ್ರೆಯಲ್ಲೇ ಹೊಸ ಅಕ್ಕಿಯನ್ನು ಬೇಯಿಸುವುದು ವಾಡಿಕೆ.

**ಗುಂಡಿಬಿಸಲೆ:** ಸಾರು, ತೋವೆ ಮತ್ತು ತರಕಾರಿ ಪಲ್ಯ ತಯಾರಿಸಲು ಉಪಯೋಗಿಸುವ ಪಾತ್ರೆ. ಇದು ಮೇಲಿನ ಪ್ರಕಾರದ್ದೇ ಆಗಿದ್ದು ಅದಕ್ಕಿಂತ ಆಳವಾಗಿರುತ್ತದೆ.

**ಕಿನ್ನಿ ಬಿಸಲೆ:** ತಿಂಡಿ ತಿನಿಸುಗಳಿಗೆ ಒಗ್ಗರಣೆ ಇಡಲು ಅಲ್ಪಸ್ವಲ್ಪ ತರಕಾರಿ ಪಲ್ಯ ತಯಾರಿಸಲು ಬಳಸುತ್ತಿದ್ದ ಸಣ್ಣ ಪಾತ್ರೆ.

**ಕುಜೆಲ್:** ಇದು ವಿಶೇಷವಾಗಿ ತಾಳೆಯ ಮರದಿಂದ ಕಳ್ಳು ತೆಗೆಯಲು ಉಪಯೋಗಿಸುವ ಪಾತ್ರೆ. ಈ ಕ್ಷೇತ್ರದಲ್ಲಿ ಇಂದಿಗೂ ಇದಕ್ಕೆ ಪರ್ಯಾಯವಾಗಿ

ಯಾವುದೇ ಪಾತ್ರೆ ಬಂದಿಲ್ಲ. ಇದು ದುಂಡಾಗಿದ್ದು ಒಯ್ಯಲು ಅನುಕೂಲವಾಗುವ ಗಾತ್ರದಲ್ಲಿರುತ್ತದೆ.

**ಅಡ್ಯರ:** ಗಂಜಿಯಿಂದ ಗಂಜಿ ನೀರನ್ನು (ತಿಳಿ) ಬೇರ್ಪಡಿಸಿ ಅನ್ನ ಮಾಡಲು ಉಪಯೋಗಿಸುವ ಪಾತ್ರೆ. ಸಾಧಾರಣ ಈ ಮೇಲೆ ಹೇಳಿರುವ ಪ್ರಕಾರದ್ದೇ ಆಗಿದ್ದು ಗಾತ್ರದಲ್ಲಿ ಸಣ್ಣದಾಗಿರುತ್ತದೆ.

**ಮುಟ್ಟೆ (ಮುಗಯಿ):** ಇದು ಸಾಧಾರಣ ಒಂದು ಲೀಟರಿನಷ್ಟು ನೀರನ್ನು ತುಂಬಬಲ್ಲ ಹಗುರವಾಗಿರುವ ಸಣ್ಣ ಕುಡಿಕೆ. ಹೆಚ್ಚಾಗಿ ಶೇಂದಿ ಅಂಗಡಿಗಳಲ್ಲಿ ಗಿರಾಕಿಗಳಿಗೆ ಶೇಂದಿ ವಿತರಿಸಲು ಈ ಪಾತ್ರೆಯನ್ನು ಬಳಸುತ್ತಾರೆ.

**ಒಲೆ:** ಒಲೆಯನ್ನು ಅಡುಗೆ ಮಾಡಲು ನೀರನ್ನು ಕಾಯಿಸಲು ಬಳಸುವ ಬೆಂಕಿ ಉರಿಯುವ ಸ್ಥಳವಾಗಿದೆ.

**ಎಣ್ಣೆ ಕುಡಿಕೆ:** ಎಣ್ಣೆಯನ್ನು ಹಾಕಿಡುವ ಕುಡಿಕೆ. ಇದರ ಬಾಯಿ ಅಗಲವಾಗಿರುತ್ತದೆ.

**ಕೊಣಮಿಗಿ:** ಇದು ರೊಟ್ಟಿ ಮಾಡಲು ಉಪಯೋಗಿಸುವ ಸಾಧನ. ಇದರ ತಳಭಾಗ ದಪ್ಪವಾಗಿದ್ದು, ಮೈ ಅಗಲವಾಗಿದ್ದು ವರ್ತುಲಾಕಾರವಾಗಿರುತ್ತದೆ.

**ಹೂಜಿ:** ಇದು ನೀರನ್ನು ತುಂಬಿಡುವ ಮಣ್ಣಿನ ಪಾತ್ರೆಯಾಗಿದೆ.

**ಬಾನಿ:** ನೀರು ತುಂಬಿಡುವ ಮಣ್ಣಿನ ದೊಡ್ಡಪಾತ್ರೆ. ಇದು ದೋಣಿಯ ಆಕಾರದಲ್ಲಿದ್ದು ಎತ್ತುಗಳಿಗೆ ನೀರು ಕುಡಿಸಲು ಇದನ್ನು ಬಳಸುತ್ತಾರೆ.

**ಬೆಳಕಿಂಡಿ ಹಂಚು:** ಮನೆಗೆ ಬೆಳಕು ಬೀಳುವ ವ್ಯವಸ್ಥೆಮಾಡುವ ಕಿಂಡಿಗಳಿರುತ್ತವೆ. ಆ ಕಿಂಡಿಗಳಿಗೆ ಹಾಕುವ ಹಂಚು.

**ನಾಲಿ:** ಮಣ್ಣಿನ ಪಾತ್ರೆ ಬಾಯಿ ಅಗಲವಾಗಿದ್ದು, ತಳ ಕಿರಿದಾಗಿರುತ್ತದೆ. ಹೆಚ್ಚಾಗಿ ಮೊಸರು ಇಡಲು ಇದನ್ನು ಬಳಸುತ್ತಾರೆ.

**ಚಿಲಮಿ:** ತಂಬಾಕು ಸೇದಲು ಬಳಸುವ ಮಣ್ಣಿನ ಕೊಳವೆ.

**ತಪ್ಪಿ:** ಇದು ನೀರು ಕಾಯಿಸಲು ಉಪಯೋಗಿಸುವ ಪಾತ್ರೆ. ಇದು ಕೊಡದಂತಿದ್ದು ಬಾಯಿ ಅಗಲವಾಗಿರುತ್ತದೆ. ತಳ ದಪ್ಪವಾಗಿರುತ್ತದೆ.

**ಸ್ವಾರಿ:** ಮಣ್ಣಿನ ಪಾತ್ರೆ ಇದು ದೊಡ್ಡದಾಗಿದ್ದು, ದಪ್ಪವಾಗಿರುತ್ತದೆ. ಹಬ್ಬ ಹರಿದಿನಗಳಲ್ಲಿ ಹುಗ್ಗಿ ಮಾಡಲು ಇದನ್ನು ಬಳಸುವರು.

**ಪಟಗಿ:** ಮಣ್ಣಿನ ಪಾತ್ರೆ ಇದು ಚಿಕ್ಕದಾಗಿದ್ದು ಕಂಠದಿಂದ ಕೆಳಕ್ಕೆ ಬಂದಾಗ ಅಗಲವಾಗಿರುತ್ತದೆ.

**ಬೇವಿನ ಸ್ವಾರಿ:** ಯುಗಾದಿಯ ಹಬ್ಬದಲ್ಲಿ ಬಳಸುವ ಪಾತ್ರೆ

**ಸಿದ್ಧಪಡಿಸುವ ವಸ್ತುಗಳು**

| ಗೃಹಬಳಕೆ | ಕೃಷಿ ಬಳಕೆ ವಸ್ತುಗಳು | ಹೊರಾಂಗಣ ವಸ್ತುಗಳು |
|---|---|---|
| ಮಡಿಕೆ (ಸ್ವಾರೆ) | ವಾಡೆ | ಹೂವಿನ ಕುಂಡ |
| ಗಡಿಗೆ | ಗುಡಾಣ | ಹುಕ್ಕ (ಚಿಲುಮೆ) |
| ಸುಟ್ಟ ಒಲೆ | ನೀರು ಕೊಳವೆ | ಪೀಕದಾನಿ |
| ನಾಡ ಹೆಂಚು | ಮುಸುರೆ ಬಾನಿ | |
| ಮುಚ್ಚಳ | | |
| ಗವಾಕ್ಷಿ | | |
| ದೀಪ (ಹಣತೆ) | | |
| ಗೋಲಕ | | |
| ಒಪ್ಪಿ(ಮಣ್ಣಿನ ಬಟ್ಟಲು) | | |
| ಕರಾಮಗಿ | | |

ಹೀಗೆ ಕುಂಬಾರ ಜನಾಂಗದವರು ತಮ್ಮ ಕಸುಬಿನಲ್ಲಿ ವಿವಿಧ ಗೃಹೋಪಯೋಗಿ ವಸ್ತುಗಳನ್ನು ಸಿದ್ಧಪಡಿಸುತ್ತಿದ್ದರು.

**ಸಾಂಸ್ಕೃತಿಕ ಸಂದರ್ಭದಲ್ಲಿ ಮಾಡುವ ವಸ್ತುಗಳು**

ಕುಂಬಾರರು ತಾವು ಮಾಡುವ ಕಸುಬಿನ ಜೊತೆಗೆ ಹಲವಾರು ಸಾಂಸ್ಕೃತಿಕ ಸಂದರ್ಭದಲ್ಲಿ ತಮ್ಮದೇ ಆದ ವಸ್ತುಗಳನ್ನು ಆರಾಧಿಸುತ್ತಾರೆ. ತಮ್ಮದೇ ಆದ ವಿಶಿಷ್ಟ ಸಂಪ್ರದಾಯವನ್ನು ಉಳಿಸಿಕೊಂಡಿದ್ದಾರೆ.

**ಮಣ್ಣೆತ್ತಿನ ಅಮಾವಾಸ್ಯ**

**ಗುಳವ್ವ:** ಆಷಾಡ ಕಾಲದಲ್ಲಿ ಕುಂಬಾರರು ಮಣ್ಣಿನಿಂದ ಮಾಡಿದ ರೈತನಿಂದ ಪೂಜೆಗೊಳ್ಳುವ ಜನಪದ ದೇವತೆ. ಮಣ್ಣೆತ್ತಿನ ಅಮಾವಾಸ್ಯೆ ಆದ ನಂತರ ಐದು ಮಂಗಳವಾರ, ರೈತರು ಐದು ತರದ ಗುಳ್ಳವ್ವನನ್ನು ಇಡುತ್ತಾರೆ. ಮೊದಲನೆಯ ಮಂಗಳವಾರ ಲಿಂಗದ ಗುಳ್ಳವ್ವ, ಎರಡನೆಯ ಮಂಗಳವಾರ ಗುಡಿಯಾಕಾರದ ಗುಳ್ಳವ್ವ, ಮೂರನೆಯ ಮಂಗಳವಾರ ಕಟ್ಟೆಯಾಕಾರದ ಗುಳ್ಳವ್ವ, ನಾಲ್ಕನೆಯ ಮಂಗಳವಾರ ಹೆಣ್ಣಿನಾಕಾರದ ಗುಳ್ಳವ್ವ, ಐದನೆಯ ಮಂಗಳವಾರ ತಿಗರಿ ಗುಳ್ಳವ್ವ ಅಥವಾ ಕುಂಬಾರ ಗುಳ್ಳವ್ವಗಳನ್ನು ಮಾಡಿ ರೈತರು ಪೂಜಿಸುತ್ತಾರೆ. ಮಾರನೆಯ ದಿನ ಬುಧವಾರ ಗುಳ್ಳವ್ವನನ್ನು ಊರ ಹೊರಗಡೆ ಕೆರೆ, ಬಾವಿಯಲ್ಲಿ ವಿಸರ್ಜನೆ ಮಾಡುತ್ತಾರೆ.

ಭೂಮಿಯಲ್ಲಿ ದುಡಿಯುವ ಬಸವಣ್ಣಗಳಿಗೆ ರಕ್ಷಣೆಕೊಡುವ ಭೂತಾಯಿಯೇ ಗುಳ್ಳವ ಆಗಿದೆ. ಗುಳ್ಳವ್ವ ದೇವರಲ್ಲಿ ಉಡಿಕೆ ಗಂಡಲ್ಲ ಎಂಬ ಗಾದೆ ಇದೆ. ಇದರಿಂದ ಗುಳ್ಳವ್ವ ಕ್ಷುದ್ರ ದೇವತೆಯಾಗಿ ಕಾಣಿಸಿಕೊಳ್ಳುತ್ತಾಳೆ.

**ಗೊಗ್ಗವ್ವ:** ಗುಳ್ಳವ್ವನ ಎಡಭಾಗದಲ್ಲಿರುವ ಮಣ್ಣಿನಿಂದ ಮಾಡಿದ ಮೂರ್ತಿ. ಇದಕ್ಕೆ ಮನುಷ್ಯಾಕೃತಿಯ ಕುತ್ತಿಗೆಯಿದ್ದು, ದೇಹ ಚಿಕ್ಕದಿರುತ್ತದೆ. ನೋಡಲು ಕುರೂಪಿ-ಯಾಗಿರುವುದು ಹಳ್ಳಿಗಳಲ್ಲಿ ಕುರೂಪಿ ಹೆಣ್ಣುಗಳಿದ್ದರೆ ಗುಳ್ಳವ್ವನ ಮುಂದಿನ ಗೊಗ್ಗವ್ವ ಆಗ್ಯಾಳ ಎಂಬ ಮಾತಿದೆ.

**ಮಣ್ಣೆತ್ತು:** ಮಣ್ಣಿನಿಂದ ಮಾಡಿದ ಎತ್ತುಗಳು ಒಕ್ಕಲಿಗರು ಕುಂಬಾರರ ಮನೆಯಿಂದ ಎರಡು ಮಣ್ಣೆತ್ತುಗಳನ್ನು ತಂದು ಪೂಜಿಸುತ್ತಾರೆ. ಒಕ್ಕಲಿಗರು ತಮ್ಮ ಹೊಲದ ಬೆಳೆಯ ಸಿರಿ ಹೆಚ್ಚು ಹೆಚ್ಚಾಗಿ ವರ್ಧಿಸಲೆಂದು ಮಣ್ಣೆತ್ತಿನ ಅಮಾವಾಸ್ಯೆಯ ದಿನ ಮಣ್ಣೆತ್ತುಗಳನ್ನು ಪೂಜಿಸುತ್ತಾರೆ.

**ಗ್ವಾದಲಿ:** ಮಣ್ಣೆತ್ತಿನ ಮುಂದೆ ಅಗಲವಾದ ಮಣ್ಣಿನ ತಟ್ಟೆ (ಕೊಟ್ಟಿಗೆಯಲ್ಲಿ ದನಗಳು ಮೇವು ತಿನ್ನುವ ಸ್ಥಳ) ಬೆಳಗಾಗಿ ಸುತ್ತಮುತ್ತಲಿನ ಕೆಲವು ಪ್ರದೇಶಗಳ ಕಡೆಗೆ ಮಣ್ಣೆತ್ತಿನ ಪೂಜೆಯ ಜೊತೆಗೆ ಗುಳ್ಳವ್ವನ ಪೂಜೆ ನಡೆಯುತ್ತದೆ.

**ಹುತ್ತಪ್ಪ:** ಮಣ್ಣಿನಿಂದ ಮಾಡಿದ ನಾಗಪ್ಪನ (ನಾಗರಹಾವಿನ) ವಿಗ್ರಹಮೂರ್ತಿ, ನಾಗರ ಪಂಚಮಿ ದಿವಸ ನಾಗದೇವನಿಗೆ ರೈತರು ಹಾಲು ಎರೆಯುತ್ತಾರೆ. ಇದಕ್ಕೆ ಹುತ್ತಪ್ಪನ ಪೂಜೆ ಎಂದು ಕರೆಯುತ್ತಾರೆ.

**ಸೀಗವ್ವ:** ಮಣ್ಣಿನಿಂದ ಮಾಡಿದ್ದು ಗೋಲಾಕಾರವಾಗಿರುವ ದೇವತೆ ಐದು ಅಥವಾ ಒಂಭತ್ತು ಮಣ್ಣಿನ ಮಜಲುಗಳಿರುತ್ತವೆ. ಸೀಗೆ ಹುಣ್ಣಿಮೆಯ ದಿನ ಯುವತಿಯರು ಕುಂಬಾರನ ಮನೆಯಿಂದ ಸೀಗವ್ವನನ್ನು ತಂದು ಪೂಜಿಸುತ್ತಾರೆ.

**ಚರಗದ ಗಡಿಗೆ:** ಸೀಗೆ ಹುಣ್ಣಿಮೆಯ ದಿವಸ ರೈತರು ಭೂಮಿ ಪೂಜೆ ಮಾಡುತ್ತಾರೆ. ಆ ದಿನ ರೈತರು ತಮ್ಮ ಹೊಲ ಹುಲಸಾಗಿ ಬೆಳೆಯಲೆಂದು ವೈವಿಧ್ಯಮಯವಾದ ಅಡಿಗೆ ಪದಾರ್ಥಗಳನ್ನು ಮಾಡಿ ಪೂಜಿಸಿ ಭೂಮಿ ತುಂಬಾ ಚೆಲ್ಲುತ್ತಾರೆ. ಅವಕ್ಕೆ ಚರಗ ಎಂದು ಕರೆಯುತ್ತಾರೆ. ಚರಗ ತುಂಬಿದ ಗಡಿಗೆ ಚರಗದ ಗಡಿಗೆ ಇದು ದೊಡ್ಡದಾಗಿರುತ್ತದೆ. ಇದರ ತಳ ದಪ್ಪದಾಗಿರುತ್ತದೆ.

**ಗೌರವ್ವ:** ಗೌರಿ ಹುಣ್ಣಿಮೆಯ ದಿನ ಗುಪ್ಪೆ (ರಾಶಿ) ಆಕೃತಿಯುಳ್ಳ ಮಣ್ಣಿನಿಂದ ಮಾಡಿದ ದೇವತೆ. ಸ್ತ್ರೀಯರು ಮಾತ್ರ ಈ ದೇವತೆಯನ್ನು ಪೂಜಿಸುತ್ತಾರೆ. ಐದು ಅಥವಾ ಒಂಭತ್ತು ದಿನ ಗೌರಿ ಕೂಡಿಸುತ್ತಾರೆ.

**ಜೋಕುಮಾರ:** ಅನಂತ ಹುಣ್ಣಿಮೆಯ ದಿನ ಕುಂಬಾರರು ಜೋಕುಮಾರನ ಮೂರ್ತಿಯನ್ನು ಮಾಡುತ್ತಾರೆ. ಈ ಮೂರ್ತಿ ಮೂರು ನಾಲ್ಕು ಅಡಿ ಎತ್ತರ ಹಳದಿ ವರ್ಣ, ಅಗಲವಾದ ಮುಖ, ಹೊಳೆಯುವ ದೊಡ್ಡ ಕಣ್ಣು. ಹಣೆಯಲ್ಲಿ ವಿಭೂತಿ ಕುಂಕುಮವಿರುವ ಸುಂದರಮೂರ್ತಿ. ಜೋಕುಮಾರ ಒಂದು ವಾರ ಪೂಜಿಸಲ್ಪಡುತ್ತಾನೆ.

**ಬೆಟ್ಟಗಡಿಗೆ:** ಯುಗಾದಿಯ ಹೊಸ ದಿವಸದಂದು ಭೂಮಿಯಲ್ಲಿರುವ ಸೀಮೆಕಲ್ಲುಗಳಿಗೆ ಸುಣ್ಣ ಕ್ಯಾಮಿ ಹಾಕಿಟ್ಟಿರುತ್ತಾರೆ.

**ಬೇವಿನಸ್ಯಾರಿ:** ಒಕ್ಕಲಿಗರು ಹೊಸ ದಿನದಂದು ಬೇವಿನ ಎಲೆ ಹೂವು ಹಾಕಿಕೊಂಡು ಸ್ನಾನಮಾಡಲು ಕುಂಬಾರನ ಮನೆಯಿಂದ ತರುವ ಸೋರೆ.

## ಹುಟ್ಟು-ಮದುವೆ ಮತ್ತು ಜಾತ್ರೆಯ ಸಂದರ್ಭದಲ್ಲಿ

**ಅಗ್ಗಟಗಿ:** ಕೆಂಡವನ್ನು ಇಟ್ಟು ಕಾಯಿಸುವ ಸಾಧನ (ಬಾಣಂತಿಯರಿಗೆ ಇದನ್ನು ಬಳಸುವರು) ಅಗ್ಗಷ್ಟಿಕೆ.

**ಇಟಕಿ:** ಕಂಠ ತೆಗೆದು ಮಾಡಿದ ಚಿಕ್ಕಬಿಂದಿಗೆ ಅದರಲ್ಲಿ ಕೆಂಡವನ್ನು ಹಾಕಿ ಅದರ ಕಾವು ಬಾಣಂತಿಯರಿಗೆ ತಲುಪುವಂತೆ ಅವಳ ಸಮೀಪದಲ್ಲಿ ಇಟ್ಟಿರುವರು.

**ಐರಾಣಿ ಕುಂಬದ ಗಡಿಗೆ:** ಜಾತ್ರೆಗಳಲ್ಲಿ ಅನ್ನ ಮಾಡಲು ಬಳಸುವ ದೊಡ್ಡದಾದ ಮಣ್ಣಿನ ಪಾತ್ರೆ ಅಥವಾ ಕೊಡ.

**ಕೊಪ್ಪರಿಗೆ:** ಅಗಲವಾದ ಬಾಯುಳ್ಳ ಪಾತ್ರೆ. ಜಾತ್ರೆಗಳಲ್ಲಿ ಕಾಯಿಪಲ್ಯ ಮಾಡಲು ಬಳಸುತ್ತಾರೆ. ಹಿರಿಕೊಪ್ಪರಿಗೆ ಜಾತ್ರೆಗಳಲ್ಲಿ ಹುಗ್ಗಿ ಮಾಡಲಿಕ್ಕೆ ನೀರು ತುಂಬಲಿಕ್ಕೆ ಬಳಸುವ ಕೊಪ್ಪರಿಗೆ.

**ಗುಳ್ಳಿ:** ಮಣ್ಣಿನ ಚಿಕ್ಕಪಾತ್ರೆ, ದೇವರ ಜಗುಲಿಯ ಮುಂದೆ ಗುಳ್ಳಿಗಳಲ್ಲಿ ಎಣ್ಣೆಯನ್ನು ಹಾಕಿಟ್ಟಿರುತ್ತಾರೆ.

**ಬೇವಿನಗುಳ್ಳಿ:** ಒಕ್ಕಲಿಗರು ಹೊಸ ದಿನದಂದು ಬೇವು-ಬೆಲ್ಲ ತಿನ್ನಲು ಕುಂಬಾರರ ಮನೆಯಿಂದ ತರುವ ಮಣ್ಣಿನ ಚಿಕ್ಕಪಾತ್ರೆ.

**ಧೂಪಾರತಿ:** ದೇವರ ಪೂಜೆ ಮಾಡುವಾಗ ಕೆಂಡ ಹಾಕಿಡುವ ಪಾತ್ರೆ. ಕೆಂಡದ ಮೇಲೆ ಗುಗ್ಗಳ ಹಾಕಿದಾಗ ಸುವಾಸನೆ ಬರುತ್ತದೆ.

**ಪಣಲೆ:** ದೇವರ ಜಗಲಿಯ ಮುಂದೆ ದೀಪವನ್ನು ಹಚ್ಚಿಡುವ ಮಣ್ಣಿನ ಬಟ್ಟಲು ಪಣತೆ > ಪಣತಿ, ಹಣತೆ > ಹಣತಿ.

**ಕಾರ್ತಿಕ ಪಣತಿ:** ದೀಪಾವಳಿಯ ಹಬ್ಬದ ದಿವಸ ಉಪಯೋಗಿಸುವ ಪಣತಿ.

**ಪರ್ಯಾಣ:** ಅಗಲವಾದ ಮಣ್ಣಿನ ಪಟ್ಟಿ. ಮುಚ್ಚಳಕ್ಕಿಂತ ದೊಡ್ಡದಿದ್ದು ಮತ್ತು ದಪ್ಪಗಿರುತ್ತದೆ. ಇದನ್ನು ಜಾತ್ರೆಗಳಲ್ಲಿ ಊಟ ಮಾಡಲಿಕ್ಕೆ ಬಳಸುತ್ತಾರೆ.

**ಮಗಿ:** ಮಣ್ಣಿನಿಂದ ಮಾಡಿದ ಸಣ್ಣ ಪಾತ್ರೆ ಬಿಂದಿಗೆಗಿಂತ ಚಿಕ್ಕದಿರುತ್ತದೆ. ಜಾತ್ರೆಗಳಲ್ಲಿ ನೀರು ಕುಡಿಯಲು ಇದನ್ನು ಬಳಸುತ್ತಾರೆ.

**ತೊರೆ:** ಇದು ದೇವಸ್ಥಾನಗಳಲ್ಲಿ ಪೂಜಾ ವಿಧಗಳಲ್ಲಿ ಬಳಸುವ ಕಳಶ. ಶವಸಂಸ್ಕಾರದ ಸಮಯದಲ್ಲಿ ಎಷ್ಟು ಶ್ರೀಮಂತರಾದರೂ ಇಂದಿಗೂ ಉಪಯೋಗಿಸುತ್ತಾರೆ. ಇದನ್ನು ತೂಗಿ ಎಂದೂ ಕರೆಯುವುದುಂಟು.

"ಕುಂಬಾರರ ಜನಾಂಗದಲ್ಲಿ ಹಬ್ಬ ಮದುವೆಯ ಸಂದರ್ಭದಲ್ಲಿ ಈ ರೀತಿಯು ಸಹ ಇರುತ್ತದೆ. ಗಂಡು ಹೆಣ್ಣಿನ ಮನೆಗೆ ಹೋದಾಗ ಇವರಲ್ಲಿ ಅನೇಕ ಬೆಡಗುಗಳಿವೆ. ಕಡವಳಿಯವರು, ಅಬಿಚಿಯವರು, ಕಡೊಡಿಯವರು, ಹತ್ತಿಸೂಲದವರು ಹೀಗೆ ಇನ್ನೂ ಕೆಲವು. ಇವರು ಹೆಣ್ಣು ತರುವಾಗ ಭಿನ್ನ ಬೆಡಗಿನಿಂದ ತರಬೇಕು. ಲಗ್ನ ಕಟ್ಟಿಸಿಕೊಳ್ಳಬೇಕಾದರೆ ಹೆಣ್ಣಿನ ಅಪ್ಪ ಒಂದುಕೆ ಅಕ್ಕಿ, ಒಂದು ಕಾಯಿ, ಐದು ಅಡಿಕೆ, ಹತ್ತು ವೀಳೆದೆಲೆ ತೆಗೆದುಕೊಂಡು ಜೋಯಿಸರ ಹತ್ತಿರ ಹೋಗಿ ಲಗ್ನ ಕಟ್ಟಿಸಬೇಕು. ಒಳ್ಳೆಯ ದಿವಸವನ್ನು ನೋಡಿಕೊಂಡು ಹೆಣ್ಣಿನ ಮನೆಗೆ ಹೋಗಿ ಲಗ್ನ ಕಟ್ಟಿಸಬೇಕು. ಮತ್ತು ಅಕ್ಕಿ, ವೀಳೆದಲೆ, ಅಡಿಕೆ ಹಣ್ಣುಕಾಯಿ ತಂದು ಉಡಿತುಂಬಿ ಊಟಮಾಡಿ 'ಎಳೆ ತಕ್ಕೊಂಡು' ಬರಬೇಕು. ಸೀರೆ ಕುಪ್ಪಸ ನಗ ಇಲ್ಲ ೧೨ ಖಂಡಗ ಭತ್ತವನ್ನು ಕೊಡಬೇಕು.

ಉಡಿಕೆ ಹೆಂನಿಗೆ ಗದ್ಯಾಣ ಒಂದು ಹೊನ್ನು. ಇದಲ್ಲದೆ ಕುಲದವರಿಗೆ ಊಟ. ಆ ಬಳಿಕ ಗಂಡು ಆ ಹೆಣ್ಣಿಗೆ ಒಂದು ಸೀರೆ ಒಂದು ಕಪ್ಪಸ ತಂದು ತನ್ನ ಮನೆಯಲ್ಲಿ ವೀಳೆ ಕೊಟ್ಟು ಮನೆ ತುಂಬಿಸಿಕೊಳ್ಳಬೇಕು.[೧] ಕುಂಬಾರ ಜನಾಂಗದಲ್ಲಿ ಸತ್ತರೆ ಸುಡುವುದುಂಟು, ಹುಗಿಯುವುದುಂಟು. ಹೀಗೆ ಕುಲಾಚಾರಗಳನ್ನು ಅನುಸರಿಸಿ ಬದುಕು ಮಾಡಬೇಕು.

---

೧. ಗದ್ಯಾಣ – ೬೪ ಗುಂಜಿ A kind of small gold coin, ಕಿಟಲ್ ಕೋಶ.

# ಉಪಸಂಹಾರ

ಗ್ರಾಮೀಣ ಪ್ರದೇಶಗಳಲ್ಲಿ ಕುಂಬಾರರು ಮಡಿಕೆ ಮಾಡುವುದನ್ನು ತಮ್ಮ ಜೀವನದ ವೃತ್ತಿಯಾಗಿ ಮಾಡುತ್ತಿರುವುದನ್ನು ನಾವು ಇಂದಿನ ದಿನಗಳಲ್ಲಿ ನೋಡುತ್ತೇವೆ. ಈ ಮಡಿಕೆಯನ್ನು ಪ್ರತಿಯೊಬ್ಬ ಮನುಷ್ಯನ ಸಂಸ್ಕೃತಿಯಲ್ಲೂ ಬಳಸುತ್ತಿದ್ದು, ಪ್ರತಿ ಜನಾಂಗದಲ್ಲೂ ಜಾತಿ ವೈಷಮ್ಯ ಮತ್ತು ಭೇದಗಳಿದ್ದರೂ ಮಡಿಕೆಯನ್ನು ಪ್ರತಿಯೊಂದು ಜಾತಿಯವರೂ ಬಳಸುತ್ತಾ ಬಂದಿದ್ದಾರೆ. ಈ ಮಡಕೆಯನ್ನು ಇಂಥವರೇ ಬಳಸಬೇಕೆಂಬ ನಿಯಮವೇನೂ ಇಲ್ಲ. ಕುಂಬಾರರು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಶೋಷಣೆಗೆ ಒಳಗಾಗಿ ಕಡು ಬಡತನದಲ್ಲಿ ಬೆಂದು ಅನಕ್ಷರರಾಗಿ, ಅನಾಗರಿಕರಂತೆ ಅಲೆದು ಊರ ಹೊರಗೆ ಗುಡ್ಡಗಾಡು ಜನರಂತೆ ಜೀವಿಸುವ ಸ್ಥಿತಿಗೆ ತಂದಿದ್ದಾರೆ. ಇದನ್ನು ಮನಗಂಡು ಸಂಘಟಿತರಾಗಿ ಇಂದಿನ ಜನತೆ ಸರಕಾರದ ಸವಲತ್ತುಗಳನ್ನು ಉಪಯೋಗಿಸಿಕೊಂಡು ಉನ್ನತಸ್ಥಾನಕ್ಕೇರುವತ್ತ ಗಮನಹರಿಸಲಿ.

ಮಡಿಕೆಯನ್ನು ಹಲವಾರು ಧರ್ಮಕಾರ್ಯಗಳಲ್ಲಿ ಬಳಸುವುದರಿಂದ ಮಡಿಕೆಗೆ ಜನಪದರು ಶ್ರೇಷ್ಠವಾದ ನಂಬಿಕೆ ಮತ್ತು ಸ್ಥಾನಮಾನವನ್ನು ನೀಡಿರುವುದರ ಜೊತೆಗೆ ಉತ್ತಮವಾದ ಗೌರವವನ್ನು ಕಲ್ಪಿಸಿಕೊಟ್ಟಿದ್ದಾರೆ. ಈ ಮಡಕೆಗಳನ್ನು ಮಗುವಿನ ಜನನ ಕಾಲದಲ್ಲಿ, ಮದುವೆಯ ಕಾರ್ಯದಲ್ಲಿ, ಸತ್ತವರನ್ನು ಉತ್ತರ ಕ್ರಿಯಾದಿ ಮಾಡುವಾಗ, ಹಬ್ಬದ ದಿನಗಳಲ್ಲಿ ಮಾತ್ರವಲ್ಲದೇ ಮನೆಗಳಲ್ಲಿ ಅಡುಗೆ ಪಾತ್ರೆಗಳಾಗಿ, ನೀರಿನ ಮಡಕೆಯಾಗಿ, ಜನರು ಬಳಸುತ್ತಿದ್ದರು.

ಕುಂಬಾರ ಸಮಾಜದ ಜನಾಂಗದ ವಿವಿಧ ಮುಖಗಳ ಸಾಹಿತ್ಯ ಮೂಡಿಬರಬೇಕಾಗಿದೆ. ಇಂತಹ ಸಾಹಿತ್ಯದಿಂದಲೆ ದೇಶಕ್ಕೆ ಕುಂಬಾರ ಜನಾಂಗದ ಸಂಸ್ಕೃತಿ, ಈ ಜನಾಂಗದ ಜನಪದ ಕಲೆಯು ಉಜ್ವಲ ಭವಿಷ್ಯ ಕಂಡುಕೊಳ್ಳಬೇಕಾಗಿದೆ. ಮತ್ತು ಇದನ್ನು ಜಗತ್ತಿಗೆ ತೋರಿಸಬೇಕಾಗಿದೆ. ಆ ನಿಟ್ಟಿನಲ್ಲಿ ಕುಂಬಾರರ ವಿಶ್ವಕೋಶ ತಯಾರಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಕುಂಬಾರ ಕುಲಬಾಂಧವರು ತಮ್ಮ ಸಂಘಟನೆ, ಬಾಂಧವ್ಯವನ್ನು ಅಭಿವೃದ್ಧಿಗೊಳಿಸಿಕೊಳ್ಳಬೇಕು. ಈ ನಿಟ್ಟಿನಲ್ಲಿ ಕುಂಬಾರ ಜನಾಂಗದವರೆಲ್ಲರೂ ತ್ಯಾಗ ಮನೋಭಾವನೆಯಿಂದ ಶ್ರಮಿಸಬೇಕಾಗಿದೆ. ಕುಂಬಾರ ಜನಾಂಗದ ಆದಿಅಂತ್ಯದವರೆಗೆ ಸಮಗ್ರವಾಗಿ ಸಂಶೋಧನೆ ಕೈಗೊಳ್ಳಬೇಕಾಗಿದೆ. ಕೇಂದ್ರದಲ್ಲಿ ಸಮಗ್ರ ವಸ್ತುಸಂಗ್ರಹಾಲಯ ಸ್ಥಾಪಿಸಬೇಕಾಗಿದೆ. ಶಬ್ದ ನಿಘಂಟು, ಸಾಹಿತ್ಯ ರಚಿಸಬೇಕಾಗಿದೆ.

ಕುಂಬಾರರ ಜನಾಂಗದವರು ಇತ್ತೀಚೆಗಷ್ಟೇ ಅಕ್ಷರಸ್ಥರಾಗಿ ಬೆಳೆಯುತ್ತಿರುವುದು ಶುಭಸೂಚನೆಯಾಗಿದೆ. ಕುಂಬಾರರ ಸಮಗ್ರ ಅಭಿವೃದ್ಧಿಯಾಗಬೇಕಾಗಿದೆ. ವಿದ್ಯಾವಂತ ಕುಂಬಾರರೆಲ್ಲರೂ ಸೇರಿ ಅಮೂಲ್ಯವಾದ ಕುಂಭ ಕಲೆಯನ್ನು ಆಧುನೀಕರಣ-ಗೊಳಿಸಬೇಕಾಗಿದೆ. ಮತ್ತೆ ಕುಂಬಾರಿಕೆಯ ಯುಗ ಪ್ರಾರಂಭವಾಗಬೇಕಿದೆ.

ಆದರೆ ಇತ್ತೀಚಿನ ದಿನಗಳಲ್ಲಿ ಇತರೆ ವಸ್ತುಗಳು ಪಾತ್ರೆಗಳು ಹಾಗೂ ಇನ್ನಿತರ ಉಪಕರಣಗಳ ಬಳಕೆಯು ಹೆಚ್ಚಾಗಿದ್ದು, ಮಡಿಕೆಯು ಮೂಲೆ ಗುಂಪಾಗಿರುವುದನ್ನು ಕಾಣುತ್ತೇವೆ. ಆದರೆ ಕೆಲವೊಂದು ಸಂಪ್ರದಾಯದ ಆಚರಣೆಗಳಲ್ಲಿ ಬಳಸುವುದನ್ನು ಬಿಟ್ಟರೆ ಯಾವುದೇ ಅಡಿಗೆ ಮಾಡುವುದಕ್ಕಾಗಲಿ, ದವಸಧಾನ್ಯಗಳನ್ನು ಇಟ್ಟುಕೊಳ್ಳು-ವುದಕ್ಕಾಗಲಿ, ನೀರನ್ನು ಶೇಖರಣೆ ಮಾಡುವುದಕ್ಕಾಗಲೀ, ಊಟದ ಪಾತ್ರೆಗಳಾಗಿ ಬಳಸುವುದಾಗಲಿ ಕಂಡುಬರುವುದಿಲ್ಲ. ಆಧುನೀಕರಣದ ಕೈಗಾರಿಕೆಯಿಂದ ಕುಂಬಾರ ಜನಾಂಗದವರು ಇತ್ತೀಚಿನ ದಿನಗಳಲ್ಲಿ ತಮ್ಮ ವೃತ್ತಿ ಬದುಕಿನ ಜೊತೆಗೆ ತನ್ನತನವನ್ನು ಕಳೆದುಕೊಂಡಿದ್ದಾರೆ.

ಕುಂಬಾರನು ಸಾಹಿತ್ಯ, ಸಂಗೀತ, ಲಲಿತಕಲೆ, ನಾಟಕ, ಜಾನಪದ ಕಲೆ, ಕುಂಬಾರಿಕೆ, ಕ್ರೀಡೆ, ಪತ್ರಿಕೆ, ರಾಜಕೀಯ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ, ಸಾಮಾಜಿಕವಾಗಿ ಅನೇಕ ಇಲಾಖೆಗಳನ್ನು ತೆರೆದು ಕಾರ್ಯಗತವಾಗಬೇಕು. ನಿಸ್ವಾರ್ಥ ಸೇವೆ, ಸತತ ಶ್ರಮ, ತ್ಯಾಗ ಮನೋಭಾವಗಳಿಂದ ಮುಂದಿನ ಪೀಳಿಗೆ ಸಮೃದ್ಧರಾಗುವತ್ತ ದುಡಿಯಬೇಕಾಗಿದೆ. ಕುಂಬಾರರ ಜನಾಂಗದವರೆಲ್ಲರು ಅರಿತು-ನುರಿತು ಒಮ್ಮತದಿಂದ, ಉತ್ಸಾಹದಿಂದ ಉನ್ನತಕ್ಕೇರಿ ಬಾಳಿ ಬದುಕಬೇಕಾಗುತ್ತದೆ.

ಕುಂಬಾರರು ನಾಡಿನಾದ್ಯಂತ ಸಂಘಸಂಸ್ಥೆಗಳನ್ನು ಕಟ್ಟಬೇಕಾಗಿದೆ. ಶಕ್ತಿ ಇಲ್ಲದ ಬಡಜನರು ಅವರ ಅವಶ್ಯಕತೆಗಳೂ ಮಿತವಾಗಿವೆ. ಜೊತೆಗೆ ಮೈಲಿಗೆಯ ಮನೋಭಾವ ಬೇರೆ. ಈ ಮಡಕೆ-ಕುಡಿಕೆಗಳನ್ನು ಬೇರೆ ಜಾತಿಯವರು ಮುಟ್ಟಿದಾಗ ಅಥವಾ ಅಪಶಕುನ ಬಂದಾಗ, ಈ ಮಡಕೆ ಕುಡಿಕೆಗಳನ್ನು ಒಡೆದು ಹೊಸದನ್ನು ತರುವುದು ಸಂಪ್ರದಾಯ. ವಿಜ್ಞಾನ ಎಷ್ಟೇ ಮುಂದುವರಿದ್ದರೂ ಜಗತ್ತಿನಲ್ಲಿ ಬಡತನವನ್ನು ನಿರ್ಮೂಲನ ಮಾಡಲು ಸಾಧ್ಯವಾಗಿಲ್ಲ. ಅಂತಹ ಬಡವರಿಗೆ ಆಧಾರ ಕುಂಬಾರನ ಮಡಕೆಗಳು.

ಇಂದಿನ ಕುಂಬಾರರ ಸ್ಥಿತಿ ಹೇಗಿದೆ? ಅವರನ್ನು ಯಾರು ಮಾತನಾಡಿಸುತ್ತಾರೆ. ದುಡಿಮೆಗೆ ಬೇಕಾಗುವ ಮಣ್ಣು, ಕಟ್ಟಿಗೆಗಳ ಕೊರತೆಯ ಜೊತೆಗೆ ಬೇರೆ-ಬೇರೆ ಉದ್ದಿಮೆಗಳೊಡನೆ ಸ್ಪರ್ಧೆಯೂ ಪ್ರಾರಂಭದಲ್ಲಿ ಸ್ಟೇನ್‌ಲೇಸ್ ಸ್ಟೀಲ್ ಸ್ಪರ್ಧೆಯನ್ನೊಡ್ಡಿತಾದರೆ ಅದು ಶ್ರೀಮಂತರ ವಸ್ತುವಾಗಿ ಪರಿಣಮಿಸಿ ಮಡಿಕೆ, ಗಡಿಗೆಗಳು

ಮಧ್ಯಮವರ್ಗದ ಜನರ ವಸ್ತುಗಳಾಗಿ ಕುಂಬಾರರನ್ನು ಬದುಕಿಸಿದವು. ಮುಂದೆ ಎರಡನೆಯದಾಗಿ ಅಲ್ಯುಮಿನಿಯಂ ಪಾತ್ರೆಗಳಿಂದ ಈಗ ಪ್ಲಾಸ್ಟಿಕ್. ಇಂತಹ ಪರಿಸ್ಥಿತಿಯಲ್ಲಿ ಕುಂಬಾರರು ಬದುಕುವುದು ದುಸ್ಸಾಧ್ಯದ ಮಾತು. ಬೇರೆ ಉದ್ದಿಮೆಗಳನ್ನು ಹುಡುಕಿಕೊಳ್ಳಬೇಕಾದರೆ ಅನಕ್ಷರತೆ ಅಜ್ಞಾನ ಬಡತನಗಳೇ ಆಗರವಾಗಿರುವ ಕುಂಬಾರನಿಗೆ ಇದು ಅಷ್ಟು ಸುಲಭ ಸಾಧ್ಯವಿಲ್ಲ.

ಕುಂಬಾರರ ಮಡಕೆಗಳ ನವೀನ ರೀತಿಯಲ್ಲಿ ಆಕರ್ಷಣೀಯವಾಗಿ ತಯಾರಿಸಲ್ಪಟ್ಟರೆ, ಅಂತಹ ಮಡಕೆಗಳ ಬೇಡಿಕೆಯು ಹೆಚ್ಚಾಗಿ ಕುಂಬಾರನಿಗೆ ಹೆಚ್ಚಿನ ಪ್ರತಿಫಲ ದೊರಕಬಹುದು. ಆದರೆ ಅಂತಹ ತರಬೇತಿ ಪಡೆದ ಕುಂಬಾರರು ಅತಿ ವಿರಳ. ಹೆಚ್ಚಾಗಿ ಹಳೆಯ ಮಾದರಿಯಲ್ಲಿಯೇ ತಯಾರಿಸುತ್ತಾರೆ. ಆಧುನಿಕ ಚಕ್ರ, ವಿದ್ಯುತ್ ಚಕ್ರಗಳ ಬಳಕೆಯಿಂದ ಮಡಕೆಗಳನ್ನು ತಯಾರಿಸುವ ವಿಚಾರವನ್ನೇ ಕೇಳದಿರುವ ಕುಂಬಾರರು ಮುಕ್ಕಾಲು ಭಾಗ ಇದ್ದಾರೆ. ಇದಕ್ಕೆ ಮುಖ್ಯ ಕಾರಣ ಅನಕ್ಷರತೆಯಾಗಿದೆ.

ಕುಂಬಾರರ ಆರ್ಥಿಕ ಸ್ಥಿತಿ ತುಂಬಾ ಕೆಳಮಟ್ಟದಾಗಿದೆ. ಸಾಲ ಪಡೆಯುವ ಮಾರ್ಗ ಗೊತ್ತಿಲ್ಲದ ಕುಂಬಾರರು ಬೇಕಾದಷ್ಟಿದ್ದಾರೆ. ಮಡಕೆ ಮಾರಿ ಬಂದ ಆದಾಯ ತನ್ನ ಎರಡು ಹೊತ್ತಿನ ಊಟಕ್ಕೂ ಸಾಲದು. ಆದಾಯ ಅದಕ್ಕಿಂತ ಕಡಿಮೆ. ಖಾದಿ ಗ್ರಾಮೋದ್ಯೋಗ ಮಂಡಳಿ ಸಹಾಯದಿಂದ ಗ್ರಾಮಾಂತರ ಕುಂಬಾರ ಕುಶಲ ಕರ್ಮಿಗಳಿಗೆ ನೆರವು ಸಿಗುತ್ತಿದ್ದರೂ ಕುಂಬಾರರಿಗೆ ಸಿಗುವ ಸೌಲಭ್ಯ ಕನಿಷ್ಟವೆಂದೇ ಹೇಳಬಹುದು. ಕಷ್ಟಪಟ್ಟು ತಯಾರಿಸಿದ ಮಡಕೆಗಳನ್ನು ನೇರವಾಗಿ ಕೊಳ್ಳಲು ಯಾವುದೇ ನಿಗಮಗಳ ಸಹಾಯವು ಇಲ್ಲವಾಗಿದೆ. ತಯಾರಿಸಿದ ಮಡಕೆಗಳು ಮಾರಾಟವಾಗದೆ ಹೊಟ್ಟೆಗೆ ಹಿಟ್ಟಿಲ್ಲದೆ ಹಸಿವಿನಿಂದ ಕೊರಗುವ ಕುಂಬಾರರಿಗೇನೂ ಕೊರತೆಯಿಲ್ಲ.

"ಕುಂಬಾರರು ನಾವು ಕುಂಬಾರರು
ಮನುಕುಲದ ಮೂಲಜರು
ಹೊತ್ತುಹೊತ್ತಿಗೆ ಮಣ್ಣಲ್ಲಿ ದುಡಿಯುತ
ಮಣ್ಣಲ್ಲಿ ಹೊನ್ನನು ಕಂಡವರು"

ಕುಂಬಾರಿಕೆ ವೃತ್ತಿಯು ಪ್ಲಾಸ್ಟಿಕ್, ಅಲ್ಯುಮಿನಿಯಂನ ಆಗಮನದಿಂದ ನಶಿಸಿಹೋಗುತ್ತಿರುವ ಈ ದಿನಗಳಲ್ಲಿ ಔದ್ಯೋಗಿಕ ಅಭಿವೃದ್ಧಿಯತ್ತ ಹಣ ಬಳಸಿ ಯಾಂತ್ರೀಕೃತ ತಿಗರಿ, ವಿದ್ಯುಚಾಲಿತ ಭಟ್ಟಿ (ಕುಲುಮೆ) ಸಿರಾಮಿಕ್ಸ್ ಮುಂತಾದ ಕುಶಲ

ಕೈಗಾರಿಕೆಯನ್ನು ನಮ್ಮದಾಗಿಸಿಕೊಂಡು ಔದ್ಯೋಗಿಕ ಅಭಿವೃದ್ಧಿಗೆ ಸಾಗಿಸಬೇಕು. ಔದ್ಯೋಗಿಕ ಅಭಿವೃದ್ಧಿಗೆ ತಮ್ಮದೇ ಆದ ಬ್ಯಾಂಕ್ ಸ್ಥಾಪಿಸಿ ಸುಲಭ ಬಡ್ಡಿ ದರದಲ್ಲಿ ಸಾಲ ಸೌಲಭ್ಯವನ್ನು ಒದಗಿಸಬೇಕು. ಸಮಾಜ ಬಾಂಧವರ ಶೈಕ್ಷಣಿಕ, ಔದ್ಯೋಗಿಕ ಅಭಿವೃದ್ಧಿಗಾಗಿ ಅವರು ದೇಶದಲ್ಲಿಯೇ ಮೇಧಾವಿಗಳಾಗಿ, ಶಿಸ್ತಿನ ಸಿಪಾಯಿಗಳಾಗಿ ಮಾನವ ಜನಾಂಗಕ್ಕೆ ಉಪಕಾರಿಯಾಗಿ ಜೀವನ ನಡೆಸುವಂತಾಗಬೇಕು. ಆಗ ಕುಂಬಾರ ಜನಾಂಗವು ಮುಂದಿನ ಪೀಳಿಗೆಗೆ ಭದ್ರ ಬುನಾದಿಯಾಗುತ್ತದೆ. ಇದನ್ನರಿತು ಜನಾಂಗವು ಒಂದಾಗಬೇಕು. ಇಲ್ಲದಿದ್ದರೆ ನಿರಾಶ್ರಿತರಾಗಿ ಅಳಿವಿನ ಅಂಚಿಗೆ ಹೋಗುವುದನ್ನು ಕಾಣಬೇಕಾಗುತ್ತದೆ.

# ಅನುಬಂಧ

## ಗ್ರಂಥಸೂಚಿ


| ಲೇಖಕರು | | ಗ್ರಂಥಗಳು |
| --- | --- | --- |
| ೧. ಎಸ್. ಎಸ್. ಅಂಗಡಿಯವರು | – | ಕುಂಬಾರ ವೃತ್ತಿ ಪದಕೋಶ |
| ೨. ಡಾ. ಅಂಬಳಿಕೆ ಹಿರಿಯಣ್ಣ | – | ಜಾನಪದ ಕೆಲವು ವಿಚಾರಗಳು |
| ೩. ಡಾ. ಚಕ್ಕೇರೆ ಶಿವಶಂಕರ್ | – | ಜನಪದ ತಂತ್ರಜ್ಞಾನ |
| ೪. ಎಂ.ಚಿದಾನಂದಮೂರ್ತಿ | – | ಹೊಸತು ಹೊಸತು |
| ೫. ವಿ.ವೆಂಕಟರಾವ್ | – | ಗೃಹ ಮತ್ತು ಸಣ್ಣ ಕೈಗಾರಿಕೆಗಳು<br>ಬೆಂಗಳೂರು ವಿಶ್ವವಿದ್ಯಾನಿಲಯ |
| ೬. ಟಿ.ವಿ.ವೆಂಕಟಾಚಲಶಾಸ್ತ್ರೀ | – | ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕುಂಬಾರ ಚಕ್ರ<br>ಪ್ರಾಚೀನ ಕನ್ನಡ ಸಾಹಿತ್ಯ ಕೆಲವು ನೋಟ |
| ೭. ಹಕಾರಿ ದೇವೇಂದ್ರಕುಮಾರ | – | ಕುಂಬಾರ ಜನಪದ ಸಾಹಿತ್ಯದರ್ಶನ ಭಾಗ –೨. |
| ೮. ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. | | ಗ್ರಾಮಸಂಸ್ಕೃತಿ ಮಾಲೆ–೧<br>ಗ್ರಾಮೀಣ ವೃತ್ತಿಗಳು |
| ೯. ಪಿ.ವೀರಶೆಟ್ಟಿ ಎಂ.ಎ., ಬಿ.ಇಡಿ<br>ಗೌರವ ಸಂಪಾದಕ | – | ಕುಂಭನುಡಿ (ರಾಷ್ಟ್ರೀಯ ತ್ರೈಮಾಸಿಕ ಪತ್ರಿಕೆ) |
| ೧೦. ವಕ್ತೃಗಳು ಹೇಳಿದ ವಿವರಗಳು | – | ಶ್ರೀ ಯ॥ ಜವರಶೆಟ್ಟರು<br>ವಯಸ್ಸು ೬೦<br>ವೃತ್ತಿ – ಕುಲಕಸಬು<br>ದೂರಗ್ರಾಮ |


***

# ಕುಂಬಾರಿಕೆಯ ವಿವಿಧ ಬಗೆಯ ಛಾಯಾಚಿತ್ರಗಳು



ದೃಶ್ಯ –೧ : ಆವಿಗೆಯಲ್ಲಿ ಮಡಕೆ, ಕುಡಿಕೆಗಳನ್ನು ಸುಡುತ್ತಿರುವುದು.



ದೃಶ್ಯ –೨ : ಆವಿಗೆಯಲ್ಲಿ ಮಡಕೆ, ಕುಡಿಕೆಗಳನ್ನು ಸುಡುತ್ತಿರುವುದು.



ಮಡಕೆಗಳನ್ನು ಮಾಡುವುದಕ್ಕೆ ಜೇಡಿಮಣ್ಣನ್ನು ತುಳಿದು ಹದ ಮಾಡುತ್ತಿರುವುದು.



ಮಡಕೆಗಳನ್ನು ತಟ್ಟುತ್ತಿರುವ ಕುಂಬಾರಗಿತ್ತಿ



ದೀಪಾವಳಿ ಹಬ್ಬಕ್ಕೆ ಮಣ್ಣಿನ ದೀಪಗಳನ್ನು ತಯಾರಿಸುತ್ತಿರುವುದು.



ಕುಂಬಾರರು ಹೂವಿನ ಕುಂಡಗಳನ್ನು ಸಿದ್ಧಪಡಿಸುತ್ತಿರುವುದು.



ಕುಂಬಾರರು ಕಸುಬು ಮಾಡುವ ಸ್ಥಳದ ದೃಶ್ಯ



ಕುಂಬಾರರು ಮದುವೆಯ ಸಮಯದಲ್ಲಿ 'ದಾಸಯ್ಯ'ರು 'ಮಣೆಸೇವೆ' ಮಾಡುತ್ತಿರುವ ದೃಶ್ಯ.



ಕುಂಬಾರರು ಶುಭಸಮಾರಂಭಗಳಲ್ಲಿ ಎಡೆಇಡುವ ಸಂಪ್ರದಾಯದ ಚಿತ್ರ.



ತಿಗರಿಯಿಂದ ಮಡಕೆಯನ್ನು ಕೊಯ್ದು ತೆಗೆಯುತ್ತಿರುವುದು

